## ಪಿ. ಆರ್. ತಿಪ್ಪೇಸ್ವಾಮಿ



ಕರ್ನಾಟಕ ಕಲಾ ಜಗತ್ತಿಗೆ ಬಹುಮುಖ ವ್ಯಕ್ತಿತ್ವದ ಶ್ರೀ ಪಿ. ಆರ್. ತಿಪ್ಪೇಸ್ವಾಮಿ ಅವರು ಚಿರಪರಿಚಿತರು. ಚಿತ್ರದುರ್ಗ ಜಿಲ್ಲೆಯ ಹರ್ತಿಕೋಟೆ ಗ್ರಾಮದಲ್ಲಿ ಜನಿಸಿದ ಶ್ರೀಯುತರು ಬಿ.ಎ. ಪದವೀಧರರು. ಜಲ ವರ್ಣ ಮಾಧ್ಯಮದಲ್ಲಿ ಪರಿಣಿತಿ ಪಡೆದ ಅವರು ಅನೇಕ ನಿಸರ್ಗ ಚಿತ್ರಗಳನ್ನು ರಚಿಸಿದ್ದಾರೆ. ಮೈಸೂರು ವಿಶ್ವವಿದ್ಯಾ- ಲಯದ ಜಾನಪದವಸ್ತು ಸಂಗ್ರಹಾಲಯದ ಅಸ್ತಿತ್ವ ಮತ್ತು ಬೆಳವಣಿಗೆಗಾಗಿ ಇವರು ಪಟ್ಟ ಪರಿಶ್ರಮ ಇವರ ಸಾರ್ಥಕ ಸಾಧನೆಗಳಲ್ಲೊಂದು. ಈಗ ಅವರು ಧರ್ಮಸ್ಥಳದ ಮಂಜೂಷ ವಸ್ತು ಸಂಗ್ರಹಾಲಯದಲ್ಲಿ ಗೌರವ ನಿರ್ದೇಶಕರಾಗಿದ್ದಾರೆ.

ನುರಿತ ಬರಹಗಾರರಾದ ಇವರು ಕಲೆ ಹಾಗೂ ಕಲಾವಿದರ ಬಗ್ಗೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ಕಲೋಪಾಸಕರು, ಭಾರತೀಯ ಚಿತ್ರಕಲೆ ರಸಯಾತ್ರೆ, ಹೋರಾಟಗಾರ ಕೆಂಚಪ್ಪ, ಎಂ. ವೀರಪ್ಪ, ಗ್ರಾಮೀಣ ವಸ್ತುಗಳು, ಕಲಾವಿದ ಕಂಡ ಫ್ರಾನ್ಸ್, ಇವರ ಪ್ರಕಟಿತ ಗ್ರಂಥಗಳು. ಅಲ್ಲದೇ ಪ್ರಶಸ್ತಿ ಪಡೆದ ಕಲಾವಿದರು ಗ್ರಂಥವನ್ನು ಸಂಪಾದಿಸಿದ್ದಾರೆ. ೧೯೭೪ರಲ್ಲಿ ರಾಜ್ಯೋತ್ಸವ ಹಾಗೂ ೧೯೮೧ರಲ್ಲಿ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಗಳನ್ನು ನೀಡಿ ಸರ್ಕಾರ ಅವರನ್ನು ಗೌರವಿಸಿದೆ. ಜಾನಪದ ಅಕಾಡೆಮಿಯ ಸದಸ್ಯರಾಗಿರುವುದಲ್ಲದೇ, ಪ್ರಸ್ತುತ ಕೇಂದ್ರ ಲಲಿತಕಲಾ ಅಕಾಡೆಮಿಯ ಸದಸ್ಯರೂ ಆಗಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಯ ಹಾಲೀ ಅಧ್ಯಕ್ಷರಾಗಿರುವ ಶ್ರೀಯುತರು ಅಕಾಡೆಮಿಯ ಕಾರ್ಯ ಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಭಾಗಗಳಲ್ಲಿ ಹಮ್ಮಿಕೊಂಡು ಕಾರ್ಯ ನಿರ್ವಹಿಸುತ್ತಿದ್ದಾರೆ.

ಕಲಾವಿದರ ಮಾಲೆ - ೩೨

# ಎಸ್. ನಂಜುಂಡ ಸ್ವಾಮಿ

ಪಿ. ಆರ್. ತಿಪ್ಪೇಸ್ವಾಮಿ

ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨

**S.Nanjundaswamy:** A biography by P.R.Thippeswamy, published by K.Mukundan, Registrar, Karnataka Lalith Kala Akademy, Nrupathunga Road, Bangalore 560 002

First Impression 1994

Copies 1000

**Rs. 10=00**

Translated to English by
**Dr. Kasaravalli G.Ravish**



Typeset at Ravish's:Printed at Brindavan Printers,Bangalore

## ಮೊದಲ ಮಾತು

ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ಪುಸ್ತಕ ಪ್ರಕಟಣೆಯೂ ಒಂದು. ಅಕಾಡೆಮಿಯು ಈವರೆಗೆ ಕಲೆ ಮತ್ತು ಕಲಾವಿದರ ಬಗೆಗೆ ಅನೇಕ ಪುಸ್ತಕಗಳನ್ನು ಹೊರತಂದಿದೆ. ಈ ಪುಸ್ತಕಗಳು ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ನಡೆದು ಬಂದ ದಾರಿ ಮತ್ತು ಕಲಾವಿದರ ಜೀವನ ಚರಿತ್ರೆಯ ಬಗ್ಗೆ ತಿಳುವಳಿಕೆ ಉಂಟು ಮಾಡಲು ಸಹಾಯ ಮಾಡಬಲ್ಲುದು.

ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಇಂದಿನ ಹಿಂದಿನ ಪೀಳಿಗೆಗೆ ಹಿರಿಯರಾದ ಎಸ್. ನಂಜುಂಡಸ್ವಾಮಿ ಯವರನ್ನು ಕುರಿತದ್ದು. ಈ ಮಾಲೆಯು ಅತ್ಯಂತ ಜನಪ್ರಿಯವಾಗಿದ್ದು, ಈಗಾಗಲೇ ಕೆಲವು ಪುಸ್ತಕಗಳು ಪುನರ್ ಮುದ್ರಣಗೊಂಡಿರುವುದು ಅವುಗಳ ಆವಶ್ಯಕತೆ ಹಾಗೂ ಸಾರ್ಥಕತೆಗಳ ದ್ಯೋತಕ.

ಈ ಮಾಲೆಯ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನದ ಬಗೆಗೆ ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳು ಆಯಾ ಕಲಾವಿದರ ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ ಅವರ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾರ್ಥಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾರಸಿಕರು, ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

ಬೆಂಗಳೂರು

ಪಿ. ಆರ್. ತಿಪ್ಪೇಸ್ವಾಮಿ
ಅಧ್ಯಕ್ಷರು
ಕರ್ನಾಟಕ ಲಲಿತ ಕಲಾ ಅಕಾಡೆಮಿ



ಕನ್ನಡ ನಾಡು ಲಲಿತ ಕಲೆಗಳ ಬೀಡು. ಅದು ಸಂಗೀತ ಶಾಸ್ತ್ರದ ಜನನಿಯಾದಂತೆ ಚಿತ್ರ ಶಿಲ್ಪ ಕಲೆಗಳಿಗೂ ಶತಶತಮಾನಗಳಿಂದ ಪೋಷಣೆ ನೀಡುತ್ತಾ ಬಂದಿದೆ. ರಾಷ್ಟ್ರಕೂಟ ಹೊಯ್ಸಳ, ವಿಜಯನಗರ ಅರಸರ ಯುಗಗಳಿಂದ ಮೈಸೂರು ರಾಜ ಒಡೆಯರ ಆಳ್ವಿಕೆಯವರೆಗೆ ಈ ಭವ್ಯ ಪರಂಪರೆ ನಿರಂತರವಾಗಿ ಬೆಳೆದು ಬಂದಿದೆ. ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಮೈಸೂರು ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕಲೆಗೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. ಕಲಾಪ್ರೇಮಿಗಳಾದ ಮಹಾರಾಜರು ಜಗನ್ಮೋಹನ ಚಿತ್ರಶಾಲೆ ಮತ್ತು ಚಾಮರಾಜೇಂದ್ರ ಕಲಾಶಾಲೆಯಂತಹ ಸಂಸ್ಥೆಗಳನ್ನು ರೂಪಿಸಿ ತನ್ಮೂಲಕ ಪ್ರತಿಭಾವಂತ ಕಲಾವಿದರು ಮೂಡಿಬರುವಂತೆ ಯೋಜಿಸಿದರು. ಇಂತಹ ಕಲಾವಿದರ ಮಾಲಿಕೆಯಲ್ಲಿ ಶ್ರೀ ನಂಜುಂಡಸ್ವಾಮಿ ಧೀಮಂತ ಕಲಾ ತಪಸ್ವಿಯಾಗಿ ಬೆಳೆದರು. ಇವರು ಅರಮನೆಯ ಚಿತ್ರಕಲಾಚಾರ್ಯ ಕೇಶವಯ್ಯನವರ ಪಟ್ಟ ಶಿಷ್ಯರಾಗಿದ್ದವರು.

ಎಸ್. ನಂಜುಂಡಸ್ವಾಮಿಯವರ ವಂಶಸ್ಥರ ಊರು ಮೈಸೂರು ಜಿಲ್ಲೆಯ ಕೊಳ್ಳೇಗಾಲ .ತಂದೆ ಶಿಲ್ಪಿ ವೀರತ್ತಸ್ವಾಮಿಯವರು. ತಾಯಿಯ ತವರೂರು ಯಳಂದೂರು ತಾಲ್ಲೂಕು ಎರಗಂಬಳ್ಳಿ ಗ್ರಾಮ. ಇಲ್ಲಿ ದಿನಾಂಕ ೨೫ನೇ ಮಾರ್ಚ್ ೧೯೦೬ರಲ್ಲಿ ಸ್ವಾಮಿಯವರ ಜನನ. ಆ ಸ್ಥಳ ಕವಿವರೇಣ್ಯ ಮುಪ್ಪಿನ ಷಡಕ್ಷರಿಯವರು ವಾಸವಾಗಿದ್ದ ಪ್ರಸಿಧ್ಧ ಸ್ಥಳ. ಅಲ್ಲದೇ ಪವಾಡಪುರುಷ ಶ್ರೀ ಮಲೆಮಹದೇಶ್ವರರಾದಿಯಾಗಿ ಅನೇಕ ಪುಣ್ಯ ಪುರುಷರು ಸಂಚರಿಸಿದ ಪುಣ್ಯಭೂಮಿ ಎರಗಂಬಳ್ಳಿ. ಇಂತಹ ಸ್ಥಳದಲ್ಲಿ ಹುಟ್ಟಿದ ನಂಜುಂಡ ಸ್ವಾಮಿ ಎಂಬ ಮಗು ಕನ್ನಡ ನಾಡಿನ ಖ್ಯಾತ ಕಲಾವಿದನಾಗುತ್ತಾನೆಂದು ಯಾರೂ ಎಣಿಸಿರಲಿಲ್ಲ!

ಎಸ್. ನಂಜುಂಡಸ್ವಾಮಿಯವರ ತಂದೆ ಆ ಕಾಲದಲ್ಲಿ ಪ್ರಸಿಧ್ಧ ಶಿಲ್ಪಿಗಳು. ಬಾಲಕ ನಂಜುಂಡಸ್ವಾಮಿ ತನ್ನ ತಾಯಿಯನ್ನು ಕಳೆದು ಕೊಂಡು ತಬ್ಬಲಿಯಾಗಿ ತಂದೆಯ ಪೋಷಣೆಯಲ್ಲೇ ಬೆಳೆದರು. ಕೊಳ್ಳೇಗಾಲದಲ್ಲಿ ವಿದ್ಯಾಭ್ಯಾಸ ಮುಗಿಸಿದರು. ಜೊತೆಗೆ ವಂಶಪಾರಂಪರ್ಯವಾಗಿ ಬಂದ ಕಲಾ ಸಂಪ್ರದಾಯ ಬಾಲಕನಲ್ಲೂ ನೆಲೆಸಿ ಚಿತ್ರಕಲೆಗೆ ಶಾಸ್ತ್ರೀಯ ಅಡಿಪಾಯವನ್ನು ಹಾಕಿಕೊಟ್ಟಿತು. ಬಾಲ್ಯದಿಂದಲೂ ಮಾತೃವಿಯೋಗದಿಂದ ಎದೆಗುಂದದೇ, ಧೈರ್ಯವಾಗಿ, ಸ್ವತಂತ್ರವಾಗಿ ಬೆಳೆದ, ಬಡತನದಲ್ಲಿ ಬಳಲಿ, ಕಷ್ಟ ನಿಷ್ಠುರಗಳನ್ನು ಕಂಡ, ಯುವಕ ನಂಜುಂಡಸ್ವಾಮಿ ನಿರಂತರ ಕಲಾ ಸಾಧನೆಯನ್ನು ನಡೆಸಿ ತಮ್ಮ ಪ್ರತಿಭೆಗೆ ಮೆರುಗನ್ನು ಕೊಡುತ್ತಾ ಬಂದರು. ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆದವರಲ್ಲ. ಸಂಸ್ಕೃತದ ಅಧ್ಯಯನವನ್ನೂ ಮಾಡಿದ್ದ ಇವರಿಗೆ ಕಾಳಿದಾಸನ ಕಾವ್ಯಗಳಲ್ಲಿ ಆಸಕ್ತಿ ಇತ್ತು. ಇವರ ಕಾವ್ಯ ಗುರು ಕಾಳಿದಾಸನೇ. ಬಿಡುವಿನಲ್ಲಿ ಈ ಅಭ್ಯಾಸ ಮುಂದುವರೆಸುತ್ತಿದ್ದರು. ಮುಂದೆ ನಂಜುಂಡಸ್ವಾಮಿಯವರನ್ನು ಮೈಸೂರು ಆಕರ್ಷಿಸಿತು. ಇಲ್ಲಿ ಇವರ ತಂದೆಯವರ ಅಣ್ಣಂದಿರ ಮಕ್ಕಳಾದ ಶಿಲ್ಪ ಸಿದ್ಧಾಂತಿ ಶ್ರೀ ಸಿದ್ದಲಿಂಗಸ್ವಾಮಿಯವರ ಬಳಿ ಕೆಲಕಾಲ ನೆಲಸಿದ್ದರು. ಅಭಿನವ ಜಕ್ಕಣನೆನಿಸಿದ್ದ ಸಿದ್ದಲಿಂಗಸ್ವಾಮಿಯವರು ಚಿತ್ರ, ಶಿಲ್ಪ ಎರಡೂ ಕಲಾ

ಪ್ರಕಾರಗಳಲ್ಲಿ ಸಿದ್ಧಿ ಪಡೆದವರಾಗಿದ್ದರು. ಇವರಂತೆಯೇ ತಾವೂ ಹೆಸರುಗಳಿಸ ಬೇಕೆಂಬ ಬಯಕೆ ಯುವಕ ನಂಜುಂಡಸ್ವಾಮಿ ಅವರದು.

ಮೈಸೂರಿನ ಚಾಮರಾಜೇಂದ್ರ ಕಲಾಶಾಲೆ ಹಾಗೂ ಮುಂಬಯಿಯ ಸರ್ ಜೆ.ಜೆ. ಕಲಾಶಾಲೆಗಳ ಮೆಟ್ಟಿಲು ಹತ್ತಿ ಬಂದರಾದರೂ ಇವರ ನಿಷ್ಠೆಯೇ ಇವರ ಮೂಲ ಗುರು. ಶಾಸ್ತ್ರೀಯ ಕಲಾ ಸಂಪ್ರದಾಯದ ಜೊತೆಗೆ ಪಾಶ್ಚಾತ್ಯ ಕಲಾ ಸಂಪ್ರದಾಯವನ್ನೂ ಜೀರ್ಣಿಸಿ ಕೊಂಡು ಕಲಾ ಕೌಶಲವನ್ನು ಸಾಧಿಸಿಕೊಂಡರು. ಉತ್ತಮ ಸಾಹಿತ್ಯಾಭ್ಯಾಸಿಗಳಾಗಿದ್ದ ಇವರು ಸಂಸ್ಕೃತ, ಕನ್ನಡ ಹಾಗೂ ಆಂಗ್ಲ ಭಾಷೆಯಲ್ಲಿ ಪಾಂಡಿತ್ಯವನ್ನು ಹೊಂದಿ ಭಾರತೀಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದರು.

ತಾರುಣ್ಯದಲ್ಲಿ ಆರಮನೆಯ ಕಲಾವಿದ ಹಾಗೂ ನೆಚ್ಚಿನ ಕಲಾಗುರು ಕೇಶವಯ್ಯನವರ ನೆರವು ಪಡೆದು ತಮ್ಮ ಕಲಾ ಜ್ಞಾನವನ್ನು ಪಕ್ವ ಮಾಡಿಕೊಂಡರು. ತಮ್ಮ ಗುರುಗಳ ಜೊತೆಯಲ್ಲಿ ಅರಮನೆ-ಗುರುಮನೆಗಳ ಅನೇಕ ಕೃತಿಗಳನ್ನು ರಚಿಸಿ ಪಳಗಿದ ಕೈ ಇವರದಾಗಿತ್ತು.

ಸ್ವಾಮಿಯವರು ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಮಂಡ್ಯ ತಾಲ್ಲೂಕಿನ ಹೊಳಲು ಗ್ರಾಮದ ಕೆಂಪಾಚಾರ್ ಅವರ ಪುತ್ರಿ ಲಕ್ಷ್ಮಿದೇವಮ್ಮನವರನ್ನು ಮದುವೆಯಾದರು. ನಂತರ ಕೆಲವು ಕಾಲ ಮೈಸೂರಿನ ಚಾಮುಂಡೀಪುರಂನಲ್ಲಿದ್ದರು. ನಂತರ ಗುರುಗಳ ಒತ್ತಾಯಕ್ಕೆ ಮಣಿದು ಒಂಟಿಕೊಪ್ಪಲಿನಲ್ಲಿ ನಿವೇಶನ ಪಡೆದು ಪುಟ್ಟ ಮನೆ ಕಟ್ಟಿಕೊಂಡರು.

**ಶಿಕ್ಷಕರಾಗಿ:**

ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯಲ್ಲಿ ರಾಮಸ್ವಾಮಿ ಐಯಂಗಾರ್‌ರವರು ಮುಖ್ಯಾಧಿಕಾರಿಗಳಾಗಿದ್ದರು. ಅವರು ಸ್ವಾಮಿಯವರುಗಳ ಕಲಾ ಚಾತುರ್ಯವನ್ನು ಬಹಳವಾಗಿ ಮೆಚ್ಚಿ ಕೊಂಡವರಲ್ಲಿ ಒಬ್ಬರಾಗಿದ್ದರು. ಇದರಿಂದ ಸ್ವಾಮಿಯವರನ್ನು ಶಿಕ್ಷಕರನ್ನಾಗಿ ನೇಮಿಸಿಕೊಂಡರು. ಸ್ವಾಮಿಯವರು ರಾಮಸ್ವಾಮಿ ಅಯ್ಯಂಗಾರರನ್ನು

ಕೊನೆತನಕ ನೆನೆಯುತ್ತಿದ್ದರು. ಅಂದಿನ ಕಾಲದಲ್ಲಿ ಬರುತ್ತಿದ್ದ ಸಂಬಳ ಅತ್ಯಲ್ಪ. ಆದರೂ ಅವರದು ತೃಪ್ತಿಯ ಜೀವನ.

ಸ್ವಲ್ಪ ಗುಂಡಾದ ತಲೆ, ಬಿಳಿ ಮಿಶ್ರಿತ ಕಪ್ಪು ಗುಂಗುರು ಕೂದಲು, ಅಚ್ಚಗಪ್ಪಿನ ಕಂದು ವರ್ಣದ ಟೈ, ನಡುವಿನಲ್ಲಿ ಅಂಗಿಯನ್ನು ನುಂಗಿಕೊಂಡಿರುವ ಶರಾಯಿಯನ್ನು ಅಪ್ಪಿ ಕೊಂಡಿರುವ ಮಂದವಾದ ಕಪ್ಪು ಬಣ್ಣದ ಬೆಲ್ಟ್, ಕಾಲಿನಲ್ಲಿ ಸಾದಾ ರೀತಿಯ ಪಾದರಕ್ಷೆ, ಮೇಜಿನ ಮೇಲೆ ಒಂದು ಮೂಲೆಯಲ್ಲಿ ಅವರ ಕುಲಾವಿ, ಕುರ್ಚಿಯ ಬೆನ್ನಿನ ಒಂದು ಅಂಚಿನಲ್ಲಿ ತೂಗುತ್ತಿರುವ ಕಲಾ ಸಾಮಗ್ರಿಗಳನ್ನೊಳಗೊಂಡ ಕೈಚೀಲ, ಮೇಜಿನ ಅಂಚಿನಲ್ಲಿಯೇ ಇಣುಕುತ್ತಿರುವ ನಶ್ಯದ ಡಬ್ಬಿ, ಅರೆತೆರೆದ ಕಪಾಟಿನಲ್ಲಿ ಅವರು ಚಿತ್ರಿಸಿ ಎಸೆದ, ಅಸ್ತವ್ಯಸ್ತವಾಗಿ ಬಿದ್ದ ಅನೇಕ ಸಣ್ಣ ಸಣ್ಣ ಜಲವರ್ಣ ಚಿತ್ರಗಳು, ಬಿಡುವಿದ್ದಾಗಲೂ ಇವರು ಕಾಲವನ್ನು ವ್ಯರ್ಥವಾಗಿ ಕಳೆಯರೆಂಬುದಕ್ಕೆ ಸಾಕ್ಷಿಯೆಂಬತ್ತಿರುತ್ತಿದ್ದವು. ನನ್ನಂಥ ಎಷ್ಟೋ ವಿದ್ಯಾರ್ಥಿಗಳ ವಿಚಾರ ಶಕ್ತಿ ಬೆಳೆಯಲು ಅವರಿಗೆ ಸ್ವಾತಂತ್ರ್ಯವಿತ್ತಿದ್ದರು. ಇವರ ಉನ್ನತ ಕೃತಿಗಳನ್ನು ವೀಕ್ಷಿಸಿದವರು, ಇವರ ಸಾಧಾರಣ ವೇಷ ನೋಡಿ, ಅಂತಹ ಮೇರು ಕೃತಿಗಳನ್ನು ರಚಿಸಿದಾತ ಇವರೇ? ಎಂದು ಸಂದೇಹ ಪಡುತ್ತಿದ್ದರು.

ಬಿಡುವಿನ ವೇಳೆಯಲ್ಲಿ ತಮ್ಮ ಗುರು ಕೇಶವಯ್ಯನವರೊಂದಿಗೆ ಕೃತಿಗಳನ್ನು ರಚಿಸುತ್ತಿದ್ದರು. ಕೇಶವಯ್ಯನವರಿಗೆ ಬರುತ್ತಿದ್ದ ಬಹುಪಾಲು ಚಿತ್ರದ ಗುತ್ತಿಗೆಗಳನ್ನು ಸ್ವಾಮಿಗಳೇ ಮಾಡಿ ಮುಗಿಸಿ ಕೊಡುತ್ತಿದ್ದರು. ಚಿತ್ರ ರಚನೆಗೂ ಮುಂಚೆ ಕಾನ್ವಾಸ್‌ಗಳನ್ನು ಸಿದ್ಧ ಪಡಿಸುವುದು, ಕ್ಯಾನ್ವಾಸಿಗೆ ಮೊದಲ ಕೋಟಿಂಗ್ ಬಣ್ಣ ಕೊಡುವುದು, ಹೀಗೆ ಪೂರೈಸುತ್ತಾ ಅಂತಿಮ ಘಟ್ಟವನ್ನು ಮಾತ್ರಾ ಗುರುಗಳಿಗೆ ಬಿಟ್ಟು ಬಾಕಿಯದ್ದನ್ನೆಲ್ಲಾ ತಾವೇ ಮಾಡಿ ಮುಗಿಸುತ್ತಿದ್ದರು. ರಾಜಾರವಿವರ್ಮನ ಚಿತ್ರಗಳಿಂದ ಸ್ಫೂರ್ತಿಗೊಂಡ ಕೇಶವಯ್ಯನವರು ರಚಿಸಿದ ತೈಲವರ್ಣ ಚಿತ್ರಗಳಲ್ಲಿ ಅಪರೂಪದ ವರ್ಣಗಾರಿಕೆ ಇರುತ್ತಿತ್ತು. ಉತ್ತಮ ಕಲಾ ಪ್ರೌಢಿಮೆ ಮೆರೆಯುತ್ತಿತ್ತು. ಈ ಎಲ್ಲಾ ಗುಣಗಳೂ ಸ್ವಾಮಿಯವರು ರಚಿಸಿದ ಚಿತ್ರಗಳಲ್ಲಿ ಮೂಡಿ ಬರುತ್ತಿದ್ದವು. ಗುರು ಶಿಷ್ಯರ ಚಿತ್ರಗಳಲ್ಲಿ ವ್ಯತ್ಯಾಸ ಕಂಡು

ಹಿಡಿಯುವುದೇ ಕಷ್ಟವಾಗುತ್ತಿತ್ತು. ಸಂಜೆ ಆಯಿತೆಂದರೆ ಗುರುಗಳ ಸ್ಟುಡಿಯೋಕ್ಕೆ ಹೋಗಿ ಕೃತಿಗಳ ರಚನೆಯಲ್ಲಿ ತೊಡಗುತ್ತಿದ್ದರು. ಇದರಿಂದ ಸಾಕಷ್ಟು ಹಣವೂ ಕೈಗೆ ಬರುತ್ತಿತ್ತು. ಇದಕ್ಕಿಂತ ಹೆಚ್ಚು ತಾವು ಮಾಡಿದ ಕೆಲಸಕ್ಕೆ ತೃಪ್ತಿಯೂ ಸ್ವಾಮಿಯವರುಗೆ ದೊರೆಯುತ್ತಿತ್ತು.

ಕೇಶವಯ್ಯನವರ ನೆರವು ಸಿಕ್ಕಿ ಸ್ವಾಮಿಯವರ ಕಲಾಸಾಧನೆ ಪಕ್ವವಾಯಿತು. ಅನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹ ಸ್ವಾಮಿಯವರಿಗೆ ಸಿಕ್ಕಿದ ಪರಿಣಾಮವಾಗಿ ಇವರ ಕಲಾ ಪ್ರೌಢಿಮೆ ಪ್ರಕಾಶಕ್ಕೆ ಬರಲು ಅವಕಾಶವಾಯಿತು. ಆಗ ಇವರು ಚಿತ್ರಿಸಿದ ಕೆಲವು ತೈಲ ಚಿತ್ರಗಳು ಮಹಾರಾಜರ ಮೆಚ್ಚುಗೆಗೆ ಪಾತ್ರವಾಗಿ ಅರಮನೆಯ ಕಲ್ಯಾಣ ಮಂಟಪವನ್ನು ಅಲಂಕರಿಸಿದವು. ಈಗಲೂ ಅವು ಅಲ್ಲಿವೆ. ಪಾಶ್ಚಾತ್ಯ ಶೈಲಿಯಲ್ಲಿ ರಚಿಸಿದ ಈ ಕೃತಿಗಳಲ್ಲಿ ಜನರ ಭಾವ ಭಂಗಿ, ಚಲನ ವಲನ, ಬಹಳ ಸ್ವಾಭಾವಿಕವಾಗಿ ಮೂಡಿ ಬಂದಿವೆ.

೧೯೩೨ರಲ್ಲಿ ಬೆಂಗಳೂರಿನಲ್ಲಿ ನಡೆದ ಕಾಂಗ್ರೆಸ್ ವಸ್ತು ಪ್ರದರ್ಶನಕ್ಕೆ ಬಂದಿದ್ದವರು ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಪ್ರದರ್ಶನಾಲಯದ ವಿಭಾಗಕ್ಕೆ ಕಾಲಿಟ್ಟೊಡನೆ ಅಲ್ಲಿಯ ಕಲಾ ವೈಭವವನ್ನು ಕಂಡು ಮಂತ್ರ ಮುಗ್ಧರಾಗದೇ ಇರುತ್ತಿರಲಿಲ್ಲ. ರಾಜನೊಬ್ಬ ಠೀವಿಯಿಂದ ತನ್ನ ಪರಿವಾರದವರೊಡನೆ ಕುಳಿತು ಓರ್ವ ಸುಂದರಿಯ ನಟನಾ ಕೌಶಲ್ಯವನ್ನು ವೀಕ್ಷಿಸುತ್ತಿರುವ ದೃಶ್ಯದ ಒಂದು ವಿಶಿಷ್ಟ ಕಲಾಕೃತಿ ಅಲ್ಲಿ ಪ್ರದರ್ಶನಗೊಂಡಿತ್ತು. ನೃತ್ಯಾವಲೋಕಿಗಳ ವಿವಿಧ ಭಾವ ಬಂಗಿಗಳು, ಅವರವರ ವೇಷ ಭೂಷಣಗಳು, ಸನ್ನಿವೇಷದ ಕಲ್ಪನೆ, ಹಿನ್ನಲೆಯ ನಟಿಯ ನಟನ ಚಾತುರ್ಯ, ಅವಳ ಮುಖದ ಮಂದಹಾಸ ಮುಂತಾದುವುಗಳನ್ನು ಚಿತ್ರೀಕರಿಸುವುದರಲ್ಲಿ ಸ್ವಾಮಿಯವರು ತುಂಬಾ ನೈಪುಣ್ಯ ತೋರಿದ್ದರು. ಈಗ ಈ ಕೃತಿ ಮೈಸೂರಿನ ಓರ್ವ ಕಲಾಭಿಮಾನಿಯ ಮನೆಯನ್ನಲಂಕರಿಸಿದೆ.

ಸ್ವಾಮಿಯವರು ಕುಶಲ ಕಲೆಯ ಎಲ್ಲಾ ಪ್ರಕಾರಗಳಲ್ಲೂ ಅದ್ವಿತೀಯ ಪ್ರೌಢಿಮೆ ಗಳಿಸಿ ಕೊಂಡಿದ್ದರು. ರೇಖಾ ಚಿತ್ರಗಳಲ್ಲಿಯೇ ಆಗಲಿ, ತೈಲ ಅಥವಾ

ಜಲವರ್ಣದಲ್ಲಿಯೇ ಆಗಲಿ ಅವರು ತೋರುತ್ತಿದ್ದ ಚಾಕಚಕ್ಯತೆ ಅಸಾಧಾರಣವಾದದ್ದು. ಪ್ರಕೃತಿಯ ಯಾವುದೇ ವರ್ಣಗಳನ್ನು ಕಣ್ಣಿಗೆ ಕಟ್ಟುವಂತೆ ಸಹಜ ಸುಂದರವಾಗಿ ಕೃತಿಗಳಲ್ಲಿ ಮೂಡಿಸುವ ಕಲಾ ಸೃಜನ ಶಕ್ತಿಯನ್ನು ಅವರು ಪಡೆದಿದ್ದರು.

ಮೈಸೂರಿನ ವಾಣಿವಿಲಾಸ ಮೊಹಲ್ಲಾದಲ್ಲಿರುವ ಮಾಹಾಜನ ಹೈಸ್ಕೂಲಿನ ಭಿತ್ತಿಯೊಂದರ ಮೇಲೆ ಅವರು ಬಿಡಿಸಿರುವ ಶಾರದಾ ದೇವಿಯ ಚಿತ್ರವಿದೆ. ತೈಲವರ್ಣದ ಕಾಲ್ಪನಿಕ ಚಿತ್ರವಿದು. ಶಾರದೆಯ ಮುಖಭಾವ, ಅಲಂಕಾರ, ಸನ್ನಿವೇಶ, ಎಲ್ಲವೂ ಸ್ವಾಮಿಯವರ ಕಲಾ ಪ್ರೌಢಿಮೆಗೆ ಸಾಕ್ಷಿಯಾಗಿದೆ.

ಸ್ವಾಮಿಯವರು ಅವರ "ಕಬೀರ್" ತೈಲ ಚಿತ್ರದಲ್ಲಿ ಮುಂಜಾವಿನ ನಸುಗತ್ತಲ ಪ್ರಶಾಂತ ವಾತಾವರಣದ ಕಲ್ಪನೆ ವಿಶಿಷ್ಟವಾಗಿದ್ದು ಕಬೀರ್ ತನ್ನ ಹೆಗಲ ಮೇಲೆ ತನ್ನ ಪತ್ನಿಯನ್ನು ಕೂಡಿಸಿಕೊಂಡು ಹೋಗುತ್ತಿದ್ದಾನೆ. ಆಕೆ ಕೈ ಜೋಡಿಸಿ ದೇವರನ್ನು ಪ್ರಾರ್ಥಿಸುತ್ತಿರುವಂತೆ, ಕಬೀರ ತನ್ನ ಪತ್ನಿಯ ಎರಡು ಮೊಣಕಾಲುಗಳನ್ನು ಬಿಗಿದಪ್ಪಿ ಗಂಭೀರ ಭಾವದಿಂದ ಸಾಗುವಂತೆ ಚಿತ್ರವಿದೆ. ಆಕೆಯ ಸೀರೆ , ಕುಪ್ಪಸದ ಪೀತಾಂಬರ, ಕೈ ಬಳೆಗಳು, ಮೂಗಿನ ಬುಲಾಕು, ಇವುಗಳ ಮೆರಗು ಸಹಜವರ್ಣಗಳಲ್ಲಿ ಮೂಡಿ ಬಂದಿದೆ. ಇಲ್ಲಿ ಕಲಾವಿದರು ಸಾರ್ಥಕ್ಯ ಪಡೆದಿದ್ದಾರೆ ಎಂದನಿಸುತ್ತದೆ.

ಮೈಸೂರಿನ ದಸರಾ ವಸ್ತು ಪ್ರದರ್ಶನದ ಹಳೆಯ ಕಟ್ಟಡಕ್ಕೆ ಕಾಲಿಟ್ಟೊಡನೆಯೇ ನಮ್ಮ ಎದುರಿಗೆ ಸ್ವಾಮಿಯವರುಗಳಿಂದ ರೂಪಿಸಲ್ಪಟ್ಟ ಶ್ರೀ ಜಯಚಾಮರಾಜೇಂದ್ರ ಒಡೆಯರ ಭಾವ ಚಿತ್ರವೊಂದು ಕಾಣುತ್ತಿದ್ದದ್ದು ಇನ್ನೂ ನೆನಪಿನಲ್ಲಿದೆ. ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಸ್ವಾಮಿಯವರ ಅನೇಕ ಕೃತಿಗಳಿಗೆ ಬಹುಮಾನ ಬಂದಿದೆ. ಹೀಗೆ ಬಹುಮಾನ ಗಳಿಸಿದ ಅನೇಕ ಚಿತ್ರಗಳಲ್ಲಿ ಎರಡರ ಬಗ್ಗೆ ಕಲಾವಿದ ಎಸ್. ಸೀತಾರಾಂ ನೆನಪು ಮಾಡುತ್ತಾರೆ. "ಅಜ್ಜ ಮತ್ತು ಮೊಮ್ಮಗ" ಹಾಗೂ "ಸನ್ಯಾಸಿ" ಎಂಬ ಎರಡು ತೈಲ ಚಿತ್ರಗಳವು.

ಆ ಕಾಲದಲ್ಲಿ ಮೈಸೂರು ದಸರಾ ಕಲಾಪ್ರದರ್ಶನ ಭಾರತದಲ್ಲೇ ಪ್ರಸಿದ್ಧವಾಗಿತ್ತು. ಭಾರತದ ಅನೇಕ ಖ್ಯಾತ ಕಲಾವಿದರು ಈ ಪ್ರದರ್ಶನಕ್ಕೆ ತಮ್ಮ ಕೃತಿಗಳನ್ನು ಕಳಿಸುತ್ತಿದ್ದರು. ಈ ಪ್ರದರ್ಶನದಲ್ಲಿ ಬಹುಮಾನ ಪಡೆಯುವುದು ಎಂದರೆ ಪ್ರತಿಷ್ಠೆಯ ಮಾತಾಗಿತ್ತು. ಇಲ್ಲಿ ಸ್ವಾಮಿಯವರುಯವರ ಅನೇಕ ಕೃತಿಗಳು ಬಹುಮಾನ ಗಳಿಸಿವೆ.

ಸಾಹಿತಿ ಚದುರಂಗರ ಮನೆಯಲ್ಲಿ ಸ್ವಾಮಿಯವರು ರಚಿಸಿದ ಜಲವರ್ಣ ಸಂಯೋಜನ ಚಿತ್ರ 'ಕುಮಾರ ರಾಮ' ಇದೆ. ಅದನ್ನು ನೋಡಿದ ಯಾರೇ ಆಗಲಿ ಸ್ವಾಮಿಯವರ ಕುಂಚ ವೈಭವಕ್ಕೆ, ಕಲ್ಪನಾ ಚಾತುರ್ಯಕ್ಕೆ ಬೆರಗಾಗುತ್ತಾರೆ. ೧೯೫೪ರಲ್ಲಿ ಚದುರಂಗರ ಕಾದಂಬರಿ 'ಉಯ್ಯಾಲೆ' ಯ ರಕ್ಷಾಪುಟಕ್ಕೆ ಚಿತ್ರವನ್ನು ಸ್ವಾಮಿಯವರು ಸಂತೋಷದಿಂದ ರಚಿಸಿಕೊಟ್ಟರು. "ಹೇಗಿದೆ?" ಎಂದು ಚದುರಂಗರನ್ನು ಕೇಳಿದರು. "ಚೆನ್ನಾಗಿಲ್ಲ, ನೀವು ಕಾದಂಬರಿಯ ವಿಷಯವನ್ನು ಚೆನ್ನಾಗಿ ಅರ್ಥಮಾಡಿ ಕೊಂಡು ಚಿತ್ರ ರಚಿಸಿಲ್ಲ. ಬೇರೆ ಬರೆದು ಕೊಡಿ" ಎಂದರು ಚದುರಂಗರು. ಆಗ ಸ್ವಾಮಿಯವರ ಕೋಪ ಮೂಗಿನ ತುದಿಗೆ ಬಂದಿತು. ಬೇರೆಯವರು ಈ ಮಾತು ಹೇಳಿದ್ದರೆ ಚಿತ್ರವನ್ನು ಹರಿದು ಚೂರು ಮಾಡುತ್ತಿದ್ದರೋ ಏನೋ? ಆದರೆ ಚದುರಂಗರ ವಿಷಯದಲ್ಲಿ ಹಾಗೆ ಮಾಡದೇ, ಅವರ ಕಲ್ಪನೆಗೆ ತಕ್ಕಂತೆ ಬೇರೆ ಒಂದು ಅದ್ಭುತ ಚಿತ್ರ ರಚಿಸಿ ಕೊಟ್ಟರು.

ಚದುರಂಗರ 'ಸ್ವಪ್ನ ಸುಂದರಿ', ಚನ್ನವೀರ ಕಣವಿ ಅವರ 'ಮಧುಚಂದಿರ', ದೇವೀರಪ್ಪನವರ 'ಬೆಳುವಲದ ಮಡಿಲಲ್ಲಿ' ಎಚ್ಚೆಸ್ಕೆ ಅವರ 'ಶ್ರೀರಾಮಾನುಜ' ಮುಂತಾದ ಪುಸ್ತಕಗಳಿಗೆ ಸ್ವಾಮಿಯವರು ರಚಿಸಿಕೊಟ್ಟಿರುವ ಕಲಾಕೃತಿಗಳು ಅವರ ಕಲಾ ಪ್ರೌಢಿಮೆಯ ನಿದರ್ಶನಗಳು.

ನಂಜುಂಡಸ್ವಾಮಿಯವರು ಭಾವಚಿತ್ರ, ಸಂಯೋಜನ ಚಿತ್ರ ಹಾಗೂ ರೇಖಾಚಿತ್ರಗಳಲ್ಲಿ ಅಪ್ರತಿಮರಾಗಿದ್ದರು. ಸ್ವಾಮಿಯವರು ರಚಿಸಿದ ಭಾವಚಿತ್ರಗಳು ಮೈಸೂರು ನಗರದ ಗಣ್ಯರ ಮನೆಗಳಲ್ಲಿ ಇಂದಿಗೂ

ನೋಡಬಹುದಾಗಿದೆ. ಸ್ವಾಮಿಯವರು ಭಾವಚಿತ್ರ ರಚನೆಗೆ ಸಂಭಂಧಿಸಿದಂತೆ ಒಂದು ಸಂದರ್ಭ ನೆನಪಾಗುತ್ತದೆ. ಸ್ವಾಮಿಯವರ ಆಪ್ತ ಮಿತ್ರರಾಗಿದ್ದ ಸಾಹಿತಿ ಚದುರಂಗರು ನನಗೆ ಹೇಳಿದ ಸಂಗತಿ ಇದು.

ಚದುರಂಗರು ಹಾಗೂ ಸ್ವಾಮಿಯವರು ಇಬ್ಬರೂ ಮೈಸೂರಿನ ಒಂಟಿಕೊಪ್ಪಲಿನಲ್ಲಿ ವಾಸವಾಗಿದ್ದರು. ಇವರ ಕಲೆಗೆ ಆಕರ್ಷಿತರಾದವರಲ್ಲಿ ಚದುರಂಗರೂ ಒಬ್ಬರು. "ಮಹಾ ಮೇಧಾವಿ ಸ್ವಾಮಿಗಳೇ" ಎಂದು ಚದುರಂಗರು ಅವರನ್ನು ಕರೆದರೆ, "ಅರಸಿನವರೇ" ಎಂದು ಸ್ವಾಮಿಯವರು ಅವರನ್ನು ಕರೆಯುತ್ತಿದ್ದರು. ಉತ್ತಮ ಸಂಸ್ಕೃತ ಪಾಂಡಿತ್ಯ ಗಳಿಸಿದ್ದ ಸ್ವಾಮಿಯವರು, ಆಗಾಗ್ಗೆ ಸಾಹಿತ್ಯದ ಬಗ್ಗೆ ಚದುರಂಗರೊಡನೆ ಚರ್ಚಿಸುತ್ತಿದ್ದರು. ಆದರೆ ಎಲ್ಲಾ ದೊಡ್ಡ ಕಲಾವಿದರಂತೆ ಅವರಲ್ಲೂ ಒಂದು ಕೊಂಕು ಸ್ವಭಾವ ಮನೆಮಾಡಿತ್ತು. ಬಹುಶಃ ಇದಕ್ಕೆ ಮುಖ್ಯ ಕಾರಣ ಸ್ವಾಮಿಯವರು ಯಾರನ್ನೂ ಅಷ್ಟಾಗಿ ನಂಬುತ್ತಿರಲಿಲ್ಲ. ಅವರಿಗೆ ಆದ ಕೆಲವು ಕಟು ಅನುಭವಗಳಿಂದ ಸಾಮಾನ್ಯವಾಗಿ ಮಧ್ಯಮವರ್ಗದ ಜನ ನಂಬಿಕೆಗೆ ಅರ್ಹರಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದರು. ತಾವು ರಚಿಸಿದ ಶಿಲ್ಪಗಳು, ಚಿತ್ರಗಳು ಸ್ವಸಂತೋಷಕ್ಕಷ್ಟೆ, ಜನರ ಮೆಚ್ಚುಗೆ ಪಡೆಯಲು ಅಲ್ಲ, ಎಂಬ ತೀರ್ಮಾನಕ್ಕೆ ಬಂದಿದ್ದರು. ಸ್ವಾಮಿಯವರ ಕಲಾ ಚಾತುರ್ಯವನ್ನು ನೋಡಿ ಮಾರು ಹೋಗಿದ್ದ ಚದುರಂಗರು ಅವರ ಏಕ ವ್ಯಕ್ತಿ ಪ್ರದರ್ಶನವನ್ನು ಬೆಂಗಳೂರಿನಲ್ಲಿ ಅಥವಾ ದೆಹಲಿಯಲ್ಲಿ ಮಾಡಿದರೆ ಒಳ್ಳೆಯದಲ್ಲವೇ? ಎಂದು ಒಮ್ಮೆ ತಮ್ಮ ಇಂಗಿತವನ್ನು ಅವರಲ್ಲಿ ವ್ಯಕ್ತ ಪಡಿಸಿದರು

ಆದರೆ ಸ್ವಾಮಿಯವರು ಇದಕ್ಕೆ ಒಪ್ಪಲಿಲ್ಲ. "ಯಾರಿಗೆ ಬೇಕು ಕಲೆ ? ಕಲಾವಿದರ ಹಾಗೂ ಕಲೆಯ ಹೆಸರು ಮುಂದೆ ಮಾಡಿಕೊಂಡು ಪ್ರತಿಷ್ಠಿತ ವಿಮರ್ಶಕರು ತಾವು ದೊಡ್ಡವರಾಗಬೇಕು ಎಂದು ಆಶಿಸುತ್ತಾರಷ್ಟೇ. ನಾನು ನನ್ನ ಪಾಡಿಗೆ ಚಿತ್ರ ರಚನೆ ಮಾಡ್ತೀನಿ" ಎಂದು ಹೇಳುತ್ತಿದ್ದರಂತೆ.

ಇದಕ್ಕೆ ಪೂರಕವಾಗಿ ಅವರಿಗೆ ಆಗಿದ್ದ ಒಂದು ಅನುಭವವನ್ನು ಸ್ವಾಮಿಯವರು ಚದುರಂಗರ ಬಳಿ ಒಮ್ಮೆ ತೋಡಿಕೊಂಡರಂತೆ. ಒಮ್ಮೆ

ಸಕಲೇಶಪುರದ ಕಡೆಯ ದೊಡ್ಡ ಶ್ರೀಮಂತರೊಬ್ಬರು ತಮ್ಮ ಎಸ್ಟೇಟಿನ ಮನೆಗೆ ಇವರನ್ನು ಬರಮಾಡಿಕೊಂಡು, ತಮ್ಮ ಭಾವ ಚಿತ್ರ ರಚಿಸಿ ಕೊಡಲು ಒಪ್ಪಿಸಿದರಂತೆ. ಒಪ್ಪಿದ ಸ್ವಾಮಿಯವರು ಅವರ ಮುಖವನ್ನೂ, ಜೊತೆಗೆ ಅವರ ಪೊದೆ ಮೀಸೆಯನ್ನು ಸಹಜವಾಗಿಯೇ ಚಿತ್ರಿಸಿದ್ದರು. ಚಿತ್ರ ಇನ್ನೇನು ಮುಗಿಯುವ ಹಂತದಲ್ಲಿತ್ತು. ಆ ಶ್ರೀಮಂತರು ತಮ್ಮ ಗೆಳೆಯರನ್ನು ಕರೆತಂದು ತಮ್ಮ ಭಾವಚಿತ್ರವನ್ನು ಅವರಿಗೆ ತೋರಿಸಿದರು. ಅದನ್ನು ನೋಡಿದ ಆ ಮಿತ್ರರು "ನಿನ್ನ ಮುಖದಲ್ಲಿ ಇರುವ ಬರ್‍ಲು ಈ ಚಿತ್ರದಲ್ಲೂ ಇರಬೇಕೇನಯ್ಯಾ? ಮೊದಲು ತೆಗೆಸಿ ಹಾಕು" ಎಂಬ ಸೂಚನೆ ಕೊಟ್ಟರು. ಆಗ ಆ ಶ್ರೀಮಂತರು ಸ್ವಾಮಿಯವರ ಬಳಿ ಬಂದು, "ನನ್ನ ಮಿತ್ರರಿಗೆ ಆ ಮೀಸೆ ಇಷ್ಟವಿಲ್ಲ ದಯವಿಟ್ಟು ತೆಗೆದು ಬಿಡಿ" ಎಂದರಂತೆ. ಸ್ವಾಮಿಯವರಿಗೆ ಆಗ ತುಂಬಾ ಕೋಪ ಬಂದರೂ ನುಂಗಿಕೊಂಡು ಆ ಮೀಸೆಯನ್ನು ಅಳಿಸಿ ಮುಖದ ಬಣ್ಣಕ್ಕೆ ಮತ್ತೆ ಹೊಂದಾಣಿಕೆ ಮಾಡಿ ಚಿತ್ರ ಮುಗಿಸಿದರು. ಕೆಲವು ದಿನಗಳ ನಂತರ' ತವರು ಮನೆಗೆ ಹೋಗಿದ್ದ ಶ್ರೀಮಂತರ ಪತ್ನಿ ಮನೆಗೆ ಬಂದರು. "ನಿಮ್ಮ ಚಿತ್ರ ಎಲ್ಲಿಯವರೆಗೆ ಬಂದಿದೆ?" ಎಂದು ಗಂಡನನ್ನು ವಿಚಾರಿಸಿದರು. ಅತ್ಯುತ್ಸಾಹದಿಂದ ತನ್ನ ಭಾವಚಿತ್ರ ತೋರಿಸುತ್ತಾ ಗಂಡ, "ಸೊಗಸಾಗಿ ಬಂದಿದೆ ನೋಡು" ಎಂದರು. ಆ ಚಿತ್ರವನ್ನು ನೋಡಿದ ಆಕೆ, "ಈ ಚಿತ್ರದಲ್ಲಿ ನಿಮ್ಮ ಮೀಸೆನೇ ಇಲ್ಲವಲ್ಲ. ಒಳ್ಳೇ ಬೋಳಮ್ಮನ ಹಾಗೆ ಕಾಣಿಸ್ತೀರಿ. ಮೊದಲು ಮೀಸೆ ಬರೆಸ್ರೀ ಈ ಮುಖಕ್ಕೆ" ಎಂದು ಒತ್ತಾಯಿಸಿದರು.

ಶ್ರೀಮಂತರು ಮೆಲ್ಲನೆ ಸ್ವಾಮಿಯವರ ಬಳಿ ಬಂದು, "ನನ್ನ ಹೆಂಡತಿ ಮೀಸೆ ಇರಲಿ ಎಂದು ಹೇಳುತ್ತಾಳೆ. ಬೇಜಾರು ಮಾಡಬೇಡಿ. ಮೀಸೆ ಮತ್ತೆ ಬರೆದು ಬಿಡಿ." ಎಂದರಂತೆ. ಈ ಮಾತು ಕೇಳಿ ಸ್ವಾಮಿಯವರಿಗೆ ಅದೆಷ್ಟು ಕೋಪ ಬಂತೋ "ಏನ್ರೀ? ಕಲಾವಿದರು ಅಂದರೆ ಏನೆಂದು ತಿಳಿದಿರಿ? ಒಂದು ಸಲ ಮೀಸೆ ತೆಗೀರಿ ಅಂತೀರಿ. ಇನ್ನೊಂದು ಸಾರಿ ಹಾಕ್ರಿ ಅಂತೀರಿ. ನಾನು ಇನ್ನು ಆ ಚಿತ್ರ ಮುಟ್ಟಲ್ಲ, ನೀವು ಕೊಟ್ಟ ಅಡ್ವಾನ್ಸ್ ಐದು ನೂರು ರೂಪಾಯಿಗಳನ್ನು ವಾಪಾಸ್ ತೆಗೆದು ಕೊಳ್ಳಿ." ಎಂದು ಹೇಳಿ ಹಣವನ್ನು

ಅವರ ಮುಖಕ್ಕೆ ಎಸೆದು ಬಸ್ಸು ಛಾರ್ಜು ಕೂಡ ಪಡೆಯದೇ ಮೈಸೂರಿಗೆ ಬಂದರೆಂಬ ಸ್ವಾರಸ್ಯಕರ ಸಂಗತಿಯೇ ಅದು. ಅಲ್ಲಿಂದ ಸ್ವಾಮಿಯವರು ಬಹಳ ಕಾಲ ಭಾವಚಿತ್ರ ಬರೆಯುವ ಗೋಜಿಗೇ ಹೋಗಲಿಲ್ಲವಂತೆ.

ನಾನು ಸ್ವಾಮಿಯವರ ಕಲಾ ವಿದ್ಯಾರ್ಥಿಯಾಗಿದ್ದಾಗಿನ ಸಂಗತಿಯೊಂದು ನೆನಪಾಗುತ್ತದೆ. ೧೯೪೩ರ ಸಮಯ. ಆಗ ಕೈಲಾಸಂ ಅವರು ಮೈಸೂರಿನ ಸದ್ವೈದ್ಯಶಾಲೆಯ ಒಂದು ಕೋಣೆಯಲ್ಲಿ ತಂಗಿದ್ದರು. ನಾನು ಅಲ್ಲಿನ ರಮಾವಿಲಾಸ ಅಗ್ರಹಾರದಲ್ಲಿ ವಾಸವಾಗಿದ್ದೆ. ಕೈಲಾಸಂ ನಿತ್ಯ ಸ್ವಾಮಿಯವರನ್ನು ಭೇಟಿಯಾಗಲೆಂದು ಕಲಾಶಾಲೆಗೆ ಬರುತ್ತಿದ್ದರು. ಸ್ವಾಮಿಯವರು ಕೈಲಾಸಂ ಅವರೊಡನೆ ಪುರಾಣ ಪುಣ್ಯ ಕಥೆಗಳ ವಿಚಾರ ದೀರ್ಘವಾಗಿ ಚರ್ಚೆ ನಡೆಸುತ್ತಿದ್ದರು. ಇವರಿಬ್ಬರ ವಾಗ್ಯುದ್ಧ, ಒಡಂಬಡಿಕೆ, ಪರಸ್ಪರ ಪ್ರೀತಿ ಅಸದೃಶವಾದ್ದು ಎನಿಸುತ್ತದೆ. ಆ ವೇಳೆಯಲ್ಲಿ ಕೈಲಾಸಂರವರ ಒಂದು ತೈಲವರ್ಣದ ರೂಪಚಿತ್ರವನ್ನು ರಚಿಸಿದ್ದರು. ಕೈಲಾಸಂ ಅವರಿಗೆ ಅದೆಷ್ಟು ಸಂತೋಷವಾಯಿತೋ ಕಾಣೆ. ಅಲ್ಲಿ ಕುಳಿತಿದ್ದ ನನ್ನನ್ನು ಕರೆದು "ಎರಡು ಟೀ ತಂದು ಕೊಡಪ್ಪಾ ನಿಮ್ಮ ಗುರುಗಳಿಗೆ" ಎಂದು ಹೇಳಿ ಚಹಾ ತರಿಸಿಕೊಂಡು ಕುಡಿದ ಸನ್ನಿವೇಷ ಈಗಲೂ ನೆನಪಿದೆ. ಈ ಚಿತ್ರ ಈಗಲೂ ಮೈಸೂರಿನ ಸಾಹಿತಿ ವಿ.ಕೆ. ಶ್ರೀನಿವಾಸನ್ ಅವರ ಬಳಿ ಇದೆ. ಈ ಚಿತ್ರ ರಚಿಸುವ ಮುನ್ನ ಕೈಲಾಸಂರವರ ಒಂದೆರೆಡು ರೇಖಾ ಚಿತ್ರಗಳನ್ನು ಸ್ವಾಮಿಯವರು ರಚಿಸಿದ್ದರು. ಅವು ಈಗಲೂ ನನ್ನ ಸಂಗ್ರಹದಲ್ಲಿವೆ.

ಸ್ವಾಮಿಯವರು ಕೇವಲ ಚಿತ್ರ ರಚನೆಯಲ್ಲಿ ಮಾತ್ರವೇ ಅಗ್ರಗಣ್ಯರಾಗಿರಲಿಲ್ಲ. ಗಂಧದಮರ , ದಂತ, ಶಿಲೆ ಇವುಗಳ ಕೆತ್ತನೆ ಕೆಲಸದಲ್ಲಿ ಸಹ ಸಿಧ್ಧ ಹಸ್ತರಾಗಿದ್ದರು.

ಚಿತ್ರಕಲೆ ಬೇಸರವಾದಾಗ ಸ್ವಾಮಿಯವರು ದಂತ ಮತ್ತು ಗಂಧದಲ್ಲಿ ಸುಂದರ ಮೂರ್ತಿಗಳನ್ನು ನಿರ್ಮಿಸುತ್ತಿದುದೂ ಉಂಟು. ಬೇಲೂರಿನ ಶಿಲಾಬಾಲಿಕೆಯರಿಂದ ಸ್ಫೂರ್ತಿಗೊಂಡ ಇವರು ರಚಿಸಿದ ಒಂದು ಕೃತಿ ಮತ್ತು ಗಣಪತಿ ವಿಗ್ರಹಗಳು ಮೋಹಕವಾಗಿವೆ. ೧೯೫೪ರಲ್ಲಿ ಅಂದರೆ ಬಾಬು

ರಾಜೇಂದ್ರ ಪ್ರಸಾದರು ರಾಷ್ಟ್ರಪತಿಗಳಾಗಿದ್ದ ಕಾಲದಲ್ಲಿ ಇವರು ರಚಿಸಿದ ದಂತದ ಕೆತ್ತನೆಯ ಗಣಪತಿಯನ್ನು ರಷ್ಯದ ಪ್ರಧಾನಿಗೆ ಕಾಣಿಕೆಯಾಗಿ ಕೊಡಲಾಯಿತು. ಈಗ ಇದು ರಷ್ಯದ ಮ್ಯೂಸಿಯಂನಲ್ಲಿ ಪ್ರದರ್ಶಿತವಾಗುತ್ತಿದೆ. ಈ ಎರಡು ವಿಗ್ರಹಗಳ ರಚನೆ ಕಾಲದಲ್ಲಿ ನಾನು ಸ್ವಾಮಿಯವರು ವಿದ್ಯಾರ್ಥಿಯಾಗಿದ್ದೆ. ಸ್ವಾಮಿಯವರು ರಚಿಸಿದ ದಂತ ಶಿಲ್ಪದ ನೆನಪಾದಾಗಲೆಲ್ಲಾ ಒಂದು ಘಟನೆ ನೆನಪಿಗೆ ಬರುತ್ತದೆ. ಒಮ್ಮೆ ಕಲಾಶಾಲೆಯಲ್ಲಿ ಇವರು ವಿದ್ಯಾರ್ಥಿಗಳಿಗೆ ಚಿತ್ರ ಬಿಡಿಸಲು ತಿಳಿಸಿ ತಮ್ಮ ಪಾಡಿಗೆ ಏನನ್ನೋ ಮಾಡುತ್ತಾ ಕುಳಿತಿದ್ದರು. ಕಲಾ ವಿಭಾಗದ ಮೇಲಧಿಕಾರಿಯಾಗಿದ್ದ ಪಾವಂಜೆಯವರು ಇದ್ದಕ್ಕಿದ್ದಂತೆಯೇ ಕೊಠಡಿಗೆ ಬಂದರು. ಇವರು ಬಂದುದು ಸ್ವಾಮಿಯವರಿಗೆ ಗೊತ್ತಾಗಲೇ ಇಲ್ಲ. ತಲೆ ತಗ್ಗಿಸಿಕೊಂಡು ಯಾವುದೋ ಕೃತಿ ರಚನೆಯಲ್ಲಿ ಮಗ್ನರಾಗಿದ್ದರು. ಪಾವಂಜೆ ಅವರು ನಿಧಾನವಾಗಿ ಬಂದು ಸ್ವಾಮಿಯವರು ಅವರ ಹಿಂಬದಿಯಲ್ಲಿ ನಿಂತರು. ಸ್ವಾಮಿಯವರಿಗೆ ಯಾರೋ ವಿದ್ಯಾರ್ಥಿ ಬಂದು ನಿಂತಂತೆ ಅನ್ನಿಸಿತು. “ಹೋಗಯ್ಯ ಕತ್ತೆ” ಎಂದಂದರು. ಪಾವಂಜೆಯವರು “ಎಲ್ಲಿ, ಕೊಡಿ ನಿಮ್ಮ ವಿಗ್ರಹ” ಎಂದು ಅದನ್ನು ಅವರ ಕೈಗಳಿಂದ ಕಿತ್ತು ಕೊಂಡರು. ಸ್ವಾಮಿಯವರು ಕತ್ತೆತ್ತಿ ಪಾವಂಜೆಯವರನ್ನು ನೋಡಿ ದಿಗ್ಗನೆ ಎದ್ದು ನಿಂತು ತಮ್ಮ ತಪ್ಪನ್ನು ಒಪ್ಪಿ ಕೊಂಡವರಂತೆ ನಮ್ರತೆಯಿಂದ ವಂದಿಸಿ “ಕ್ಷಮಿಸಿ ಸಾರ್” ಎಂದರು. ಆ ಮೂರ್ತಿಯ ಸೌಂದರ್ಯವನ್ನು ನೋಡಿದಾಗ ಪಾವಂಜೆಯವರ ಸಿಟ್ಟು ಶಮನವಾಯ್ತು. ಕಾರಣ ಅಧಿಕಾರಿಗಳಾಗಿದ್ದ ಅವರು ಖ್ಯಾತ ಕಲಾವಿದರಾಗಿದ್ದರು. ಇವರ ಕಲಾ ಕೌಶಲ್ಯತೆಗೆ ಮಾರು ಹೋಗಿದ್ದ ಪಾವಂಜೆ ಒಮ್ಮೆ ಮೈಸೂರಿನ ರಾಮು ಸ್ಟುಡಿಯೋದಲ್ಲಿ ಮಾತನಾಡುತ್ತಾ, “ ಓ, ಆ ಸ್ವಾಮಿ ಏನು ಮಾಡುತ್ತಿದ್ದಾರೆ? ಕನ್ನಡ ನಾಡಿನಲ್ಲೇ ಅಲ್ಲ, ಇಡೀ ಭಾರತದಲ್ಲೇ ಆ ಮಟ್ಟದ ಕಲಾವಿದರು ವಿರಳ. ಈ ಮಾತನ್ನು ಕಲಾವಿದನಾಗಿ ನಾನು ಅಭಿಮಾನದಿಂದ, ಹೃದಯ ಪೂರ್ವಕವಾಗಿ ಹೇಳುತ್ತಿದ್ದೇನೆ.” ಎಂದು ಸ್ವಾಮಿಯವರು ಕಲಾ ಪ್ರೌಢಿಮೆಯನ್ನು ಮನಸಾರೆ ಕೊಂಡಾಡಿದ್ದರು.

ಹೊಗಳಿಕೆ ತೆಗಳಿಕೆಗಳಿಗೆ ಸ್ವಾಮಿಯವರು ಎಂದೂ ಗಮನ ಕೊಟ್ಟವರಲ್ಲ. ಕಲೆಯ ಸಂಶೋಧನೆಯಲ್ಲಿ ಸದಾ ನಿರತರಾಗಿರುತ್ತಿದ್ದರು. ಇವರು ವರ್ಣದ ಬಗ್ಗೆ ನಡೆಸಿದ ಸಂಶೋಧನೆ ಇವರ ಕೆಲವು ಶಿಷ್ಯರಿಗೆ ಅತ್ಯಂತ ಸಹಾಯಕವಾಯಿತು. ಪ್ರಾಚೀನ ಕಲಾವಿದರ ಕಲಾ ಸಾಧನೆಯ ವೈವಿಧ್ಯವನ್ನು, ಅವರು ಕಲೆಯನ್ನು ನೋಡುತ್ತಿದ್ದ ಉನ್ನತ ದೃಷ್ಟಿಯನ್ನು, ತಿಳಿಯುವ ಮನಃ ಪ್ರವೃತ್ತಿ ಸ್ವಾಮಿಯವರಲ್ಲಿತ್ತು. ಇವರ ಸ್ವಭಾವ ತುಂಬಾ ಕಠಿಣ, ನಾಲಿಗೆಯಂತೂ ತುಂಬಾ ಹರಿತ. ಆದರೆ ಅದರಲ್ಲಿ ಸತ್ಯ ಇರುತ್ತಿತ್ತು. ಇದರಿಂದಾಗಿ ಸ್ವಾಮಿಯವರಿಗೆ ತಮಗೆ ಮಿತ್ರರೇ ಇಲ್ಲವೇನೋ ಅನ್ನಿಸಿಬಿಡುತ್ತಿತ್ತು. ಇವರು ತಮ್ಮ ಕಠಿಣ ಸ್ವಭಾವದೊಂದಿಗೆ ಎಂದೂ ರಾಜಿ ಮಾಡಿಕೊಳ್ಳಲಿಲ್ಲ. ಅದೆಷ್ಟೋ ಅವಕಾಶಗಳು ಇದರಿಂದಾಗಿ ಅವರ ಪಾಲಿಗೆ ದಕ್ಕಲಿಲ್ಲ. ಇವರು ಬಡಪೆಟ್ಟಿಗೆ ಯಾವ ಕಲಾವಿದನ ಕಲೆಯನ್ನೂ ಒಪ್ಪುತ್ತಿರಲಿಲ್ಲ. ಅಂದರೆ ಸ್ವಾಮಿಯವರಿಗೆ ಅಸೂಯೆ ಇತ್ತು ಎಂದರ್ಥವಲ್ಲ. ಕಲೆಯ ಬಗ್ಗೆ ಇವರಿಗೆ ಇದ್ದ ಆತ್ಮ ವಿಶ್ವಾಸದಿಂದ ಸದಾ ಇವರು ಕಲೆಯ ಬಗ್ಗೆ ಮಾತನಾಡುತ್ತಿದ್ದರು. ಪ್ರಾಚೀನ ಹಾಗೂ ವಿದೇಶೀ ಪ್ರಸಿದ್ಧ ಕಲಾವಿದರ ಬಗ್ಗೆ ಅಧ್ಯಯನ ಮಾಡಿ ಅಧಿಕಾರಯುತವಾದ ತಮ್ಮ ಸ್ಪಷ್ಟ ನಿಲುವು ತಾಳುತ್ತಿದ್ದರು. ತಾವು ಅವರಲ್ಲಿ ಅನೇಕರಿಗೆ ಕಡಿಮೆ ಇಲ್ಲ ಎಂದು ಕೊಳ್ಳುವಷ್ಟು ಆತ್ಮ ವಿಶ್ವಾಸ ಸ್ವಾಮಿಯವರಲ್ಲಿತ್ತು.

ನಿವೃತ್ತರಾಗುವ ತನಕ ಸ್ವಾಮಿಯವರು ಒಂಟಿಕೊಪ್ಪಲಿನಲ್ಲಿ ತಾವೇ ಕಟ್ಟಿಸಿದ ಮನೆಯಲ್ಲಿ ವಾಸವಾಗಿದ್ದರು. ಸ್ವಾಮಿಯವರಿಗೆ ಹುಟ್ಟಿದ ಹತ್ತು ಮಕ್ಕಳಲ್ಲಿ ಉಳಿದದ್ದು ಎರಡು ಮಾತ್ರಾ. ಅವು ಗಂಡು ಮಕ್ಕಳು. ಸ್ವಾಮಿಯವರು ಮಹಾ ಮುಂಗೋಪಿಗಳಾಗಿದ್ದರು. ಶಿಸ್ತಿಗೆ ಹೆಸರಾಗಿದ್ದರು. ಶಿಸ್ತು ಮೀರಿದವರು ತಮ್ಮ ಪ್ರೇಮದ ಪತ್ನಿಯೇ ಆಗಲಿ, ಪ್ರೀತಿಯ ಪುತ್ರನೇ ಆಗಿರಲಿ, ಶಿಕ್ಷಿಸದೇ ಬಿಡುತ್ತಿರಲಿಲ್ಲ. ಸ್ವಾಮಿಯವರು ಶಿಕ್ಷೆ ತಡೆಯಲಾರದ ಹಿರಿಯ ಪುತ್ರ ಪ್ರಸಾದ ಎಷ್ಟೋ ಬಾರಿ ಮನೆ ಬಿಟ್ಟು ಹೋಗಿದ್ದು ನಾನು ಬಲ್ಲೆ. ತಮ್ಮ ಕೋಪ ಶಮನವಾಗಿ ಮನಸ್ಸು ಶಾಂತ ಸ್ಥಿತಿಗೆ ಬಂದ ಮೇಲೆ ಮಗನನ್ನು



ಭಿತ್ತಿ ಚಿತ್ರ - ಮೈಸೂರು

ಹುಡುಕಲು ಹುಚ್ಚರಂತೆ ಬೀದಿ ಬೀದಿ ಅಲೆದು ಪುನಃ ಮನೆಗೆ ಕರೆತಂದ ವಿಚಿತ್ರ ಉದಾಹರಣೆಗಳಿವೆ. ಸ್ವಾಮಿಯವರಿಗೆ ಕೋಪ ಬಂದಾಗ ಎಂಥ ದೊಡ್ಡವರೇ ಎದುರಿರಲಿ, ಚೆನ್ನಾಗಿ ಬೈದು ಬಿಡುತ್ತಿದ್ದರು. ಮರುಕ್ಷಣವೇ ತಮ್ಮ ತಪ್ಪರಿತು ಅವರ ಕ್ಷಮೆ ಬೇಡುತ್ತಿದ್ದರು. ಇಂತಹ 'ಒಂದು ವಿಲಕ್ಷಣ ಗುಣ ಇವರಲ್ಲಿತ್ತು.

ಇದಕ್ಕೆ ನನ್ನದೇ ಒಂದು ಉದಾಹರಣೆ ಇಲ್ಲಿ ಕೊಡುವುದು ಉಚಿತ . ೧೯೪೭ರ ಸಂಧರ್ಭ.. ಚಾಮರಾಜೇಂದ್ರ ಕಲಾಶಾಲೆಯಲ್ಲಿ ಎರಡನೇ ಚಿತ್ರಕಲಾ ತರಗತಿಯಲ್ಲಿ ನಾನು ಅವರ ವಿದ್ಯಾರ್ಥಿಯಾಗಿದ್ದ ವೇಳೆ. ನಾನೋ ಆದೇ ತಾನೇ ಹಳ್ಳಿಯಿಂದ ನಗರಕ್ಕೆ ಬಂದವನು. ಊಟ ವಸತಿಗೆ ಕಷ್ಟ ಪಡುತ್ತಿದ್ದವರಲ್ಲಿ ನಾನೂ ಒಬ್ಬ. ಅರಮನೆಯ ಪರಕಾಲ ಮಠದಲ್ಲಿ ನನ್ನಂಥ ಕೆಲವು ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಇತ್ತು. ನಮ್ಮ ಶಾಲೆ ಬೆಳಗಿನ ಎಂಟರಿಂದ ಸಂಜೆ ಐದರ ತನಕ -ಒಂದು ರೀತಿಯ ಜೈಲಿನ ವಾತಾವರಣ. ನಡುವೆ ಊಟಕ್ಕೆ ಹೋಗಿ ಬರಲು ಬಿಡುವೇ ಆಗುತ್ತಿರಲಿಲ್ಲ. ಒಮ್ಮೆ ಮಧ್ಯಾಹ್ನದ ತರಗತಿಗೆ ತಡವಾಗಿ ಬಂದೆ. ಇದನ್ನು ಗಮನಿಸಿದ ಸ್ವಾಮಿಯವರು ನನ್ನ ಮೇಲೆ ಕೆಂಡಕಾರಿದರು. "ಕತ್ತೆ, ನೀನು ದನಕಾಯಲಿಕ್ಕೆ ಹೋಗು, ನಿನಗೇಕೆ ಚಿತ್ರಕಲೆ, ನಾಳೆಯಿಂದ ಬರಬೇಡ" ಎಂದು ಗರ್ಜಿಸಿದರು. ಹಳ್ಳಿಯಿಂದ ಬಂದ ನನಗೆ ಮೊದಲೇ ಬಹಳ ಹೆದರಿಕೆ, ಜೊತೆಗೆ ಗೆಳೆಯರ ಎದುರು ಬೈಗುಳು ಬೇರೆ! ನಾನು ಗುರುಗಳ ಕೋಪದ ಮಾತಿಗೆ ಭಯಗೊಂಡು, ತಲೆತಗ್ಗಿಸಿ, ಕಣ್ಣೀರು ಸುರಿಸುತ್ತಾ ಬಾಗಿಲಲ್ಲೇ ನಿಂತಿದ್ದೆ. ಇವೆಲ್ಲವನ್ನು ಗಮನಿಸಿದ ಅವರು ನನ್ನ ಸಮೀಪಕ್ಕೆ ಬಂದರು. ಅವರ ಕೈಲಿ ಬಿದಿರಿನ ಬೆತ್ತವಿತ್ತು. ಅದನ್ನು ನೋಡಿ ಮತ್ತೂ ಗಾಬರಿಗೊಂಡೆ.

"ಬಾರಯ್ಯ ಏಕೆ ತಡವಾಯಿತು, ಹೇಳಯ್ಯ "ಎಂದು ವಿಚಾರಿಸಿದರು. "ಸಾರ್, ಮಠದಲ್ಲಿ ನನಗಾಗಿ ತೆಗೆದಿಟ್ಟ ಊಟ ಯಾರೋ ಉಂಡಿದ್ದಾರೆ. ನನ್ನನ್ನು ಉಪವಾಸ ಬೀಳಿಸಿದ್ದಾರೆ. ಆದರಿಂದ ತಡವಾಯಿತು" ಎಂದೆ. ಹಸಿವಿನಿಂದ ಬಾಡಿದ ನನ್ನ ಮುಖ ನೋಡಿದರು. ನಿಜ ಸಂಗತಿ ಅವರಿಗೆ ಅರ್ಥವಾಯಿತು. ಅವರ ಮನಸ್ಸು ಕರಗಿತು.

"ಅಯ್ಯೋ, ಪಾಪ. ಏನೇನೋ ಅಂದು ಬಿಟ್ಟೆ. ಹೋಗಲಿ ಬಿಡಯ್ಯ. ಮೊದಲು ನೀನು ಹೋಟೇಲಿಗೆ ಹೋಗಿ ತಿಂಡಿ ತಿಂದು ಬಾ" ಎಂದು ಒಂದಿಷ್ಟು ಚಿಲ್ಲರೆ ಕೊಟ್ಟು ಕಳಿಸಿದರು. ಸ್ವಾಮಿಯವರ ಅಂತಹ ಕರುಣಾಮಯಿ ಗುಣವನ್ನು ಮರೆಯಲಾದೀತೇ?

ನಂಜುಂಡ ಸ್ವಾಮಿಯವರ ಜೊತೆ ವೈ. ಸುಬ್ರಹ್ಮಣ್ಯ ರಾಜು ಅವರು ಕೂಡ ಚಾಮರಾಜೇಂದ್ರ ಕಲಾಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದರು. ಕೇಶವಯ್ಯನವರು ಇವರಿಬ್ಬರ ಕಲಾ ಗುರುಗಳು.

೧೯೩೯ರಲ್ಲಿ ಇವರಿಬ್ಬರೂ ಹೆಚ್ಚಿನ ವ್ಯಾಸಂಗಕ್ಕಾಗಿ ಮುಂಬಯಿಯ ಸರ್. ಜೆ.ಜೆ. ಕಲಾಶಾಲೆಯನ್ನು ಸೇರಿದರು. ಒಂದೇ ರೂಮಿನಲ್ಲಿ ಇವರಿಬ್ಬರ ವಸತಿ. ಗಿರಗಾಂವ್ ಬ್ಯಾಂಕ್ ರಸ್ತೆಯಲ್ಲಿನ ಉಡುಪಿ ಹೋಟೇಲ್ ಒಂದರಲ್ಲಿ ಇವರ ಊಟ, ತಿಂಡಿ. ೧೬ ರೂಪಾಯಿಗಳಿಗೆ ೬೦ ಊಟದ ಚೀಟಿಗಳನ್ನು ಕೊಂಡು ತಮ್ಮ ಊಟದ ವ್ಯವಸ್ಥೆ ಮಾಡಿಕೊಂಡಿದ್ದರು.

ಸ್ವಾಮಿಯವರ ಚಿತ್ರಕಲಾ ನೈಪುಣ್ಯ ಪರಿಶೀಲಿಸಿ ಅವರಿಗೆ ಮೂರನೆ ಕಲಾ ತರಗತಿಗೆ ಪ್ರವೇಶ ನೀಡಲಾಯಿತು. ನಂತರ ನಾಲ್ಕು ಮತ್ತು ಐದನೆಯ ವರ್ಷದ ಡ್ರಾಯಿಂಗ್ ಮತ್ತು ಪೇಂಟಿಗ್‌ನ ಅಡ್ವಾನ್ಸ್ ಪರೀಕ್ಷೆಗೆ ಕುಳಿತು ತೇರ್ಗಡೆಯಾದರು.

ಕ್ಯಾಪ್ಟನ್ ಗ್ಲಾಡ್‌ಸ್ಟನ್ ಸಾಲೋಮನ್ ಅವರು ಶಾಲೆಯ ಪ್ರಾಂಶುಪಾಲರಾಗಿದ್ದರು. ರಾವ್ ದುರಂಧರ್ ಅವರು ಉಪ ಪ್ರಾಂಶುಪಾಲ ರಾಗಿದ್ದರು. ಶಾಲೆಯನ್ನು ಉನ್ನತ ಮಟ್ಟಕ್ಕೆ ತಂದ ಕೀರ್ತಿ ಇವರಿಬ್ಬರದು. ಸ್ವಾಮಿಯವರು ಇವರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದರು. ಕೆ.ಬಿ.ಚೂಡೇಕರ್ ಇವರ ಕಲಾಗುರುಗಳಾಗಿದ್ದರು.

ಸ್ವಾಮಿಯವರು ಗಿರಿಗಾಂವ್ ರೋಡಿನ ಠಾಕೂರ್‌ವಾರ್ ಗಲ್ಲಿಯ ಕಾಲಾರಾಮ್ ಪೀಲಾರಾಮ್ ಮಂದಿರದ ಅಗ್ನಿಹೋತ್ರಿ ಚಾಳ್‌ನ ಎರಡನೆಯ ಮಹಡಿಯ ಕೋಣೆಯಲ್ಲಿ ವಾಸವಾಗಿದ್ದರು.

ಭಿತ್ತಿಚಿತ್ರ ಅಲಂಕರಣ (Mural Decoration) ವಿಭಾಗದಲ್ಲಿ

ಅಧ್ಯಯನ ಮಾಡುತ್ತಿದ್ದ ಕನ್ನಡ ಕಲಾ ವಿದ್ಯಾರ್ಥಿಗಳಲ್ಲಿ ಮಿಣಜಿಗಿ ಅವರೂ ಒಬ್ಬರು.

ಸ್ವಾಮಿಯವರು ಬೆಳಗಿನ ವೇಳೆ ವಾಕಿಂಗ್ ಹೋಗುವ ಅಭ್ಯಾಸ ಇಟ್ಟು ಕೊಂಡಿದ್ದರು. ಹೊರಗಡೆ ಹೋದಾಗಲೆಲ್ಲಾ ರೇಖಾಚಿತ್ರಗಳನ್ನು ರಚಿಸಿಕೊಂಡು ಬರುತ್ತಿದ್ದರು. ಸ್ನಾನಮಾಡಿ ಮನೆ ದೇವರಿಗೆ ಪ್ರಾರ್ಥನೆ ಸಲ್ಲಿಸಿ ನಂತರ ಹೋಟೇಲಿನಲ್ಲಿ ತಿಂಡಿ ಸೇವಿಸಿ, ಅಲ್ಲಿಂದ ಕಲಾಶಾಲೆಗೆ ಟ್ರಾಂನಲ್ಲಿ ಹೋಗುತ್ತಿದ್ದರು. ಶಾಲೆಯಲ್ಲಿ ಫರ್ನಾಂಡೀಸ್, ಧುರಂಧರ್, ನಗರ್ಕರ್ ಇವರೆಲ್ಲರೂ ಆಲಂಕಾರಿಕ ಚಿತ್ರ ರಚಿಸುವುದನ್ನು ನೋಡುವ ಅವಕಾಶ ಸ್ವಾಮಿಯವರಿಗೆ ದೊರಕಿತ್ತು.

ಸ್ವಾಮಿಯವರು ತಮ್ಮ ಗುರುಗಳಾದ ಕೇಶವಯ್ಯನವರ ಬಳಿ ಚಿತ್ರ ರಚನೆ ಮಾಡಿ ಸಂಪಾದಿಸಿದ ಹಣ ಬಿಟ್ಟರೆ ಬೇರೆ ಯಾವುದೇ ಆರ್ಥಿಕ ಬಲವಿರಲಿಲ್ಲ. ತಂದಿದ್ದ ಪುಡಿಗಂಟು ಎರಡೇ ವರ್ಷಗಳಲ್ಲಿ ಕರಗಿ ಹೋಯಿತು. ಬೇರೆಯವರ ಮುಂದೆ ಕೈಯೊಡ್ಡಿ ಬೇಡುವ ಪ್ರವೃತ್ತಿ ಇವರಿಗೆ ಸರಿದೋರಲಿಲ್ಲ. ಅವರು ಅಲ್ಲಿನ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಕಲಾ ಸಾಧನೆ, ಸಿಧ್ಧಿ ಗಳಿಸಿದ್ದರು. ಅಲ್ಲಿ ಮುಂದುವರಿಯುವುದು ಅವರಿಗೆ ಸುತರಾಂ ಇಷ್ಟವಾಗಲಿಲ್ಲ. ಸರ್ಟಿಫಿಕೇಟ್‌ಗೆ ಕಾಯುವುದೂ ಸಹಾ ಅವರಿಂದ ಸಾಧ್ಯವಾಗಲಿಲ್ಲ. ಆರ್ಥಿಕ ಮುಗ್ಗಟ್ಟು, ಮುಂಬಯಿಯ ಮತೀಯ ಗಲಭೆಗಳು ಅವರ ಶಾಂತ ಮನವನ್ನು ಕಲಕಿ, ಜಿಗುಪ್ಸೆ ತರಿಸಿತು. ಹಾಗಾಗಿ ಮೈಸೂರಿಗೆ ಹಿಂತಿರುಗಿದರು.

ಮೈಸೂರಿನಲ್ಲಿ ಚಿತ್ರ ರಚನೆಗೆ ತಮ್ಮನ್ನು ತೊಡಗಿಸಿಕೊಂಡ ಇವರು, ಸಿಮ್ಲಾ, ಪುಣೆ, ತಿರುವಾಂಕೂರು, ಬೆಂಗಳೂರು, ಮುಂಬಯಿ, ಮೈಸೂರಿನ ದಸರಾ ಕಲಾ ಪ್ರದರ್ಶನಗಳಿಗೆ ಕೃತಿಗಳನ್ನು ಕಳುಹಿಸುತ್ತಾ ಬಂದರು. ಬಹುಮಾನಗಳ ಮೇಲೆ ಬಹುಮಾನಗಳು ಬರತೊಡಗಿದವು.

ತಮ್ಮ ಗುರು ಕೇಶವಯ್ಯನವರ ಜೊತೆ ಅರಮನೆಯ ಕೆಲಸದಲ್ಲಿ ಸ್ವಾಮಿಯವರು ಅನೇಕ ಚಿತ್ರಗಳನ್ನು ರಚಿಸಿ ಕೊಟ್ಟರು. ಮೈಸೂರಿನ ಜಗನ್ಮೋಹನ ಚಿತ್ರಶಾಲೆಯ ಪಕ್ಕದಲ್ಲಿ ಮಹಾರಾಜರು ಎರಡು ಸ್ಟುಡಿಯೋಗಳನ್ನು ನಿರ್ಮಿಸಿದ್ದರು. ಇಲ್ಲಿ ಕೇಶವಯ್ಯ, ವೈ.ಸುಬ್ರಹ್ಮಣ್ಯ ರಾಜು,

ನಂಜುಂಡ ಸ್ವಾಮಿ, ಎಸ್. ಆರ್. ಐಯ್ಯಂಗಾರ್ ಮೊದಲಾದ ಕಲಾವಿದರು ಸೇರಿಕೊಂಡು ತಮಗೆ ನೀಡಿದ ದಸರಾ ಮೆರವಣಿಗೆ ಚಿತ್ರಗಳನ್ನು ರಚಿಸುತ್ತಿದ್ದರು. ಸ್ವಾಮಿಯವರು ತಮ್ಮ ಕೆಲಸವನ್ನು ಶೀಘ್ರವಾಗಿ ಪೂರೈಸಿ, ಜೊತೆಯಲ್ಲಿ ತಮ್ಮ ಗುರುಗಳ ಕೆಲಸವನ್ನೂ ಪೂರೈಸುಸುವುದರಲ್ಲಿ ತಮ್ಮ ಸಾಧನೆಯನ್ನು ತೋರಿಸಿದರು.

ಫ್ರೆಂಚ್ ಗೌರ್ನರ್ ಒಮ್ಮೆ ಮೈಸೂರಿಗೆ ಭೇಟಿನೀಡಿದಾಗ ೧೦" x ೧೨" ಗಾತ್ರದ ಸ್ವಾಮಿಯವರ ತೈಲಚಿತ್ರ "ಕುಕ್" ಅವರ ಮನ ಸೆಳೆಯಿತು. ಅದರ ಸೌಂದರ್ಯಕ್ಕೆ ಮಾರುಹೋದ ಆ ವಿದೇಶೀಯ ಕಲಾಭಿಮಾನಿ ಅದನ್ನು ಕೊಂಡು ಹೋಗಿ ತನ್ನ ನಿವಾಸವನ್ನಲಂಕರಿಸಿಕೊಂಡರು.

ಸ್ವಾಮಿಯವರು ಮತ್ತೊಂದು ರೂಪಚಿತ್ರ ಬೋಳಮ್ಮ ಕೆಂಪುಸೀರೆ ಉಟ್ಟು ಕುಳಿತ ಹೆಂಗಸಿನ ಸೊಗಸಾದ ಚಿತ್ರ.

ಇವರ ಚಿತ್ರಗಳು ಬಹಳ ಸ್ವಚ್ಛವಾಗಿರುತ್ತವೆ. ಕೊಳೆಯಾದ ವರ್ಣಗಳಿಗೆ ಅಲ್ಲಿ ಸ್ಥಾನವಿಲ್ಲ. ಅಂದಿನ ಕಾಲದ ಆಮದಾದ ಆರ್ಟಿಸ್ಟ್ಸ್ ಆಯಿಲ್ ಕಲರ್‌ಗಳಲ್ಲಿ ರಚಿಸಿದ ಚಿತ್ರಗಳವು. ಸೇಬಲ್ ಕುಂಚಗಳು, ಲಿನ್‌ಸೀಡ್ ಎಣ್ಣೆ, ಹಾಗೂ ರಾಬರ್ಟ್‌ಸನ್ ಮೀಡಿಯಂ ವಾರ್ನೀಷ್ ಅವರು ಬಳಸುತ್ತಿದ್ದ ಹಲವು ವಸ್ತುಗಳು. ಆದ್ದರಿಂದಲೇ ಅವುಗಳು ಅಷ್ಟು ಶುಭ್ರವಾಗಿರುತ್ತಿದ್ದವು.

೧೯೩೭ರಲ್ಲಿ ವೈ. ಸುಬ್ರಹ್ಮಣ್ಯ ರಾಜು ಅವರು ಚಾಮರಾಜೇಂದ್ರ ಕಲಾ ಶಾಲೆಯಲ್ಲಿ ಅಧ್ಯಾಪಕರಾಗಿ ಸೇರಿದರು. ಅವರ ನಂತರ ಸ್ವಾಮಿಯವರು ಅಧ್ಯಾಪಕರಾಗಿ ಸೇರಿದರು.

ಅವರು ಲೈಫ್ ಪೇಂಟಿಂಗ್ಸ್ - ಅರ್ಥಾತ್ ವ್ಯಕ್ತಿ-ಜೀವನ ಚಿತ್ರಗಳನ್ನು ಬಹಳ ಸ್ವಚ್ಛವಾಗಿ ರಚಿಸುತ್ತಿದ್ದರು. ವ್ಯಕ್ತಿಗಳನ್ನು ನೋಡಿ ರೂಪಚಿತ್ರಗಳನ್ನು ರಚಿಸುವುದರಲ್ಲಿ ಸ್ವಾಮಿಯವರದು ಎತ್ತಿದ ಕೈ ಎಂಬುದು ಸುಬ್ರಹ್ಮಣ್ಯ ರಾಜು ಅವರ ಅಭಿಪ್ರಾಯ.

ಸ್ವಾಮಿಯವರನ್ನು ಹತ್ತಿರದಿಂದ ಕಂಡಿರುವ ಮಧುಗಿರಿ ರಾಮು, ಅವರ ಬಗೆಗೆ ತಮ್ಮ ಅನುಭವಗಳನ್ನು ಈ ರೀತಿ ಹೇಳುತ್ತಾರೆ.

"ನಾನು ಚಾಮರಾಜೇಂದ್ರ ಕಲಾ ಶಾಲಾ ವಿದ್ಯಾರ್ಥಿಯಾಗಿದ್ದೆ. ವೈ.ಸುಬ್ರಹ್ಮಣ್ಯ ರಾಜು ಅವರು ನನ್ನ ತರಗತಿಯ ಅಧ್ಯಾಪಕರು. ಇವರು ರಜೆ ಇದ್ದಾಗ ಸ್ವಾಮಿಯವರು ಮಾರ್ಗದರ್ಶನ ನೀಡುತ್ತಿದ್ದರು. ಗಲಾಟೆ ಇಲ್ಲದೇ ನಮ್ಮ ಕೆಲಸದಲ್ಲಿ ನಿರತರಾಗಿರುವಂತೆ ತರಗತಿಯನ್ನು ನೋಡಿಕೊಳ್ಳುತ್ತಿದ್ದರು. ಒಮ್ಮೆ ಯಾವುದೋ ದೇಶದ ರಾಜಕುಮಾರಿ ತನ್ನ ಪರಿವಾರ ಸಮೇತ ನಮ್ಮ ಶಾಲೆಗೆ ಭೇಟಿ ನೀಡಿದ್ದಳು. ಆಕೆ ನಾವು ಬರೆದ ಚಿತ್ರಗಳನ್ನು ನೋಡಿ ಶಹಭಾಸ್‌ಗಿರಿ ಕೊಟ್ಟು ಹೋದರು. ಆಗ ಸ್ವಾಮಿಯವರು ನನ್ನನ್ನು ಕೂಗಿ ಒಂದು ಚಿತ್ರ ತೋರಿಸಿ, ಇದು ಯಾರದಯ್ಯ? ಎಂದು ಕೇಳಿದರು. ನಾನೇ ಬರೆದ ರಾಜಕುಮಾರಿಯ ಜಲವರ್ಣದ ಚಿತ್ರ ಅದಾಗಿತ್ತು. ಆಕೆಯ ಸ್ವರೂಪ ಅದರಲ್ಲಿ ಮೂಡಿತ್ತು. ಜಲವರ್ಣದ ಆ ಚಿತ್ರ ನೋಡಿದ ನಾನು ಅಚ್ಚರಿ ಗೊಂಡೆ. ನನಗೆ ಅದನ್ನು ಕೊಡಿ ಎಂದು ಗೋಗರೆದೆ. ಆದರೆ ಗುರುಗಳು ಅದನ್ನು ಹರಿದು ಚೂರು ಚೂರು ಮಾಡಿ ಬಿಟ್ಟರು. ಶಾಶ್ವತವಾಗಿ ಕಾಪಾಡ ಬೇಕಾದ ಇಂತಹ ಅದೆಷ್ಟೋ ಚಿತ್ರಗಳನ್ನು ನಾಶ ಮಾಡಿದ್ದರು. ಇದು ಸ್ವಾಮಿಯವರು ವಿಚಿತ್ರ ಗುಣಗಳಲ್ಲಿ ಒಂದು."

ರಾಮು ಸ್ವಾಮಿಯವರು ಇನ್ನೊಂದು ಚಿತ್ರವನ್ನು ಇಲ್ಲಿ ನೀಡುತ್ತಾರೆ. ರಾಮು ಅವರು ವಿದ್ಯಾರ್ಥಿಯಾಗಿದ್ದಾಗ ಒಮ್ಮೆ, ಸ್ವಾಮಿಯವರು 'ರಾಮರಾಜ್ಯ' ಚಲನಚಿತ್ರ ನೋಡಿ ಬಂದರು. ಆ ಚಿತ್ರದ ಒಂದು ಸನ್ನಿವೇಶವನ್ನು ಚಿತ್ರಿಸಿ ಬಿಟ್ಟರು. ಸೀತಾ ಒಡ್ಡೋಲಗದಲ್ಲಿ 'ಮಧುರ ಮಧುರ ಕುಚ್ ಬೋಲ್' ಎಂಬ ಹಾಡನ್ನು ನುಡಿಸುತ್ತಿರುವ ಆ ಸನ್ನಿವೇಶದ ಚಿತ್ರವನ್ನು ಸ್ವಾಮಿಯವರು ಜಲವರ್ಣದಲ್ಲಿ ಯಥಾವತ್ ಸುಂದರವಾಗಿ ಚಿತ್ರಿಸಿದ್ದರು.

ಇದು ಸ್ವಾಮಿಯವರ ಜ್ಞಾಪಕ ಶಕ್ತಿ ಅದೆಷ್ಟು ತೀಕ್ಷ್ಣವಾಗಿತ್ತೆಂಬುದನ್ನು ನಿರೂಪಿಸುತ್ತದೆ.

ಒಮ್ಮೆ ಸಂಗೀತ ವಿದುಷಿ ನೀಲಾಂಬ ಕಡಾಂಬಿ ಅವರ ಸಂಗೀತ ಕಛೇರಿಗೆ ಹೋಗಿ ಬಂದ ಸ್ವಾಮಿಯವರು ತರಗತಿಯಲ್ಲಿ ಆಕೆಯ ಹಾಡುಗಾರಿಕೆಯ ಸನ್ನಿವೇಷದ ಚಿತ್ರವನ್ನು ರಚಿಸಿ ವಿದ್ಯಾರ್ಥಿಗಳಿಗೆಲ್ಲರಿಗೂ ತೋರಿಸಿದ್ದರು. ಇದೂ ಅವರ ಜ್ಞಾಪಕ ಶಕ್ತಿಗೆ ಉದಾಹರಣೆ.

ಯಾರೋ ಒಬ್ಬ ಚಿತ್ರಕಾರ ಒಂದು ಹೆಣ್ಣಿನ ಕೂದಲ ಎಳೆಯನ್ನು ನೋಡಿಯೇ ಆಕೆಯ ಭಾವಚಿತ್ರ ವನ್ನು ರಚಿಸಿದ ಎಂಬುವುದನ್ನು ಕೇಳಿದ್ದೆವು. ನಮ್ಮ ಗುರುಗಳು ಆತನಿಗಿಂತ ಯಾವುದರಲ್ಲಿ ಕಡಿಮೆ ಎಂದು ರಾಮು ಪ್ರಶ್ನೆ ಮಾಡುತ್ತಾರೆ.

"ಸ್ವಾಮಿಯವರು ನನ್ನನ್ನು ಕಂಡಾಗಲೆಲ್ಲಾ ಪುರಸೊತ್ತಾದರೆ ಮನೆ ಕಡೆ ಬಾರಯ್ಯ..... ಒಂದು ಚಿತ್ರ ಮಾಡಿದ್ದೇನೆ ಎಂದು ಕರೆಯುತ್ತಿದ್ದರು. ಮನೆಗೆ ಹೋದರೆ ಏಕಯ್ಯ ಬಂದೆ ಎನ್ನುತ್ತಿದ್ದರು. ಇದು ಅವರ ವಿಲಕ್ಷಣ ಗುಣಗಳಲ್ಲಿ ಒಂದು. ಜಗನ್ಮೋಹನ ಅರಮನೆಯ ರಸ್ತೆಯಲ್ಲಿನ ನನ್ನ ಸ್ಟುಡಿಯೋಗೆ ಬಂದರೆ ಅದೆಷ್ಟೋ ಸಲಹೆ ಕೊಡುತ್ತಿದ್ದರು. ಇಂತಹ ಗುರುಗಳ ಬಳಿ ಕಲಿತ ನಾನು ಪುಣ್ಯವಂತ. ಅಂತಹ ಗುರುಗಳು ಮುಂದೆ ಹುಟ್ಟಲಾರರು. ಅಷ್ಟು ಚೆನ್ನಾಗಿ ವಿದ್ಯಾರ್ಥಿಗಳಿಗೆ ಕಲಾಕೃತಿ ರಚನೆಯನ್ನು ಹೇಳಿ ಕೊಡುವವರು ಅಪರೂಪ" ಎನ್ನುತ್ತಾರೆ ರಾಮು.

ಕಲಾವಿದ ಎಂ.ಬಿ, ಬಸವರಾಜು ತಮ್ಮ ಅನನುಭವಗಳನ್ನು ಈ ರೀತಿ ವಿವರಿಸಿದ್ದಾರೆ. ಸ್ವಾಮಿಯವರು ಪ್ರಕೃತಿಯಲ್ಲಿ ಕಂಡದ್ದನ್ನು ನಿಜವಾಗಿ ಚಿತ್ರಿಸುತ್ತಿದ್ದರು. ನಿಸರ್ಗ ಚಿತ್ರ, ಭಾವಚಿತ್ರ , ಹಾಗೂ ಸಂಯೋಜನ ಚಿತ್ರ ರಚನೆಯಲ್ಲಿ ಅವರು ಯಶಸ್ವೀ ಕಲಾವಿದರು. ಜಲವರ್ಣ ಮತ್ತು ತೈಲವರ್ಣಗಳೇ ಅಲ್ಲದೇ ವಂಶಪಾರಂಪರ್ಯವಾಗಿ ಬಂದ ಶಿಲ್ಪ ಕಲೆಯಲ್ಲಿಯೂ ಸ್ವಾಮಿಯವರು ಎತ್ತಿದ ಕೈ. ದಂತದಲ್ಲಿ ಬೇಲೂರು, ಹಳೇಬೀಡು ದೇವಾಲಯಗಳ ಶಿಲಾಬಾಲಿಕೆಯರನ್ನು ಕೆತ್ತುತ್ತಿದ್ದರು. ಚಿತ್ರಗಳಲ್ಲಿ ರೇಖೆಗಳು ಹಾಗೂ ಬಣ್ಣಗಳ ಲೇಪನವನ್ನು ಸುಲಭವಾಗಿ ರಚಿಸುವುದನ್ನು ವಿದ್ಯಾರ್ಥಿಗಳಿಗೆ ಹೇಳಿಕೊಡುತ್ತಿದ್ದರು.

ಬಸ್ ನಿಲ್ದಾಣಗಳಲ್ಲಿ ಬಸ್ಸಿಗೆ ಕಾಯುವಾಗ ಕೂಡ ಸುಮ್ಮನೆ ಕಾಲ ಕಳೆಯದೇ ರೇಖಾ ಚಿತ್ರಗಳನ್ನು ರಚಿಸುವ ಹವ್ಯಾಸ ಸ್ವಾಮಿಯವರದು.

ವಿದೇಶದ ಕಲಾವಿದರು ಬಂದರೆ ಅವರನ್ನು ಶಾಲೆಗೆ ಕರೆತಂದು ಅವರಿಗೆ ತಮ್ಮ ಚಿತ್ರ ರಚಿಸುವಂತೆ ಕೋರುತ್ತಿದ್ದರು. ಆ ಕಲಾವಿದ ತೆಗೆದುಕೊಂಡ ಅವಧಿಗಿಂತ ಕಡಿಮೆ ಅವಧಿಯಲ್ಲಿ ಆ ಕಲಾವಿದನ ಚಿತ್ರ ಬರೆದು ಅವರಿಂದ

ಶಹಬಾಸ್‌ಗಿರಿ ಪಡೆಯುತ್ತಿದ್ದರು. ಮೊದಲು ಒಂದು ಕಣ್ಣು ,ನಂತರ ಮತ್ತೊಂದು ಕಣ್ಣು, ನಂತರ ಮೂಗು, ಬಾಯಿ..... ಹೀಗೆ ಮುಂದುವರೆಯುತ್ತಿತ್ತು.

ನಿಸರ್ಗ ಚಿತ್ರ ರಚನೆಗೆ ವಿದ್ಯಾರ್ಥಿಗಳನ್ನು ಹೊರಗಡೆ ಕರೆದುಕೊಂಡು ಹೋಗಿ ಪ್ರಕೃತಿ ಸೌಂದರ್ಯದ ನಡುವೆ ಕೂಡಿಸಿ, ವರ್ಣ ಚಿತ್ರಗಳನ್ನು ಬರೆಸುತ್ತಾ ,ಅವುಗಳನ್ನು ತಿದ್ದುತ್ತ ನಮ್ಮ ಕೈ ಪಳಗಿಸುತ್ತಿದ್ದರು. ಎಷ್ಟೋ ವೇಳೆ ಪ್ರವಾಸಗಳನ್ನು ಕರೆದು ಕೊಂಡು ಹೋಗಿ ಕೃತಿಗಳ ರಚನೆಯಲ್ಲಿ ತೊಡಗಿಸುತ್ತಿದ್ದರು. ಕಲ್ಲು ಒಂದೇ ಬಣ್ಣದಂತೆ ಕಂಡರೂ ಅದರಲ್ಲಿ ಎಷ್ಟೋ ಬಣ್ಣಗಳು ಅಡಗಿವೆ ಎಂದು ಬಣ್ಣಗಳ ಮಿಶ್ರಣದ ಬಗೆಗೆ ತಿಳಿಸುತ್ತಾ ಇದ್ದುದು ವಿಶೇಷ. ಮನುಷ್ಯಾಕೃತಿಯ ರಚನೆಯ ಬಗ್ಗೆ ಕೂಡಾ ಅಷ್ಟೆ. ಅಂಗರಚನಾ ಶಾಸ್ತ್ರದ (Anatomy) ಬಗ್ಗೆ ಹೆಚ್ಚಾಗಿ ಹೇಳುತ್ತಾ, ನಿಂತಾಗ, ಕೂತಾಗ, ನಡೆಯುವಾಗ, ಈ ರೀತಿ ಕಾಣುತ್ತಾರೆ ಎಂದು ಹೇಳಿ, ಶರೀರ ಬಗ್ಗಿಸಿ ವಿವರಿಸುತ್ತಿದ್ದರು.

ನಾವು ಚಿತ್ರ ರಚನೆಯಲ್ಲಿ ತೊಡಗಿದ್ದಾಗ ನಮ್ಮ ಹಿಂದೆ ನಿಂತು ನಮ್ಮ ತಪ್ಪು ಒಪ್ಪುಗಳನ್ನು ತಿದ್ದುತ್ತಿದ್ದರು. ಈಗಲೂ ಕೃತಿ ರಚನೆಯಲ್ಲಿ ನಾವು ತೊಡಗಿದಾಗ ಅದೇ ನೆನಪು ಕಾಡುತ್ತಿರುತ್ತವೆ.

ಹೆಚ್ಚಿಗೆ ಕಲಿಯಲು, ನಿಸರ್ಗದ ನಡುವೆ ಪ್ರಕೃತಿಯನ್ನು ಕಲಾವಿದ ಆರಾಧಿಸಬೇಕು. ನಿಸರ್ಗದ ನಡುವೆ ಕಲೆಯ ಬೇಕು. ಆಗ ಪರಿಪೂರ್ಣವಾಗಿ ಕಲಿಯಬಹುದು ಎಂದು ಸ್ವಾಮಿಯವರು ಪದೇ ಪದೇ ಹೇಳುತ್ತಿದ್ದರು.

ಚಿತ್ರ ರಚಿಸುವಾಗ ಕಾಲು ಭಾಗ ಬೆಳಕು, ಮುಕ್ಕಾಲು ಭಾಗ ಕತ್ತಲು ರೀತಿ ಚಿತ್ರಿಸಿದರೆ ಅದು ಉತ್ತಮ ಕೃತಿಯಾಗುತ್ತದೆ ಎನ್ನುತ್ತಿದ್ದರು. ಆದರಿಂದ ಅವರ ಚಿತ್ರಗಳಲ್ಲಿ ಕತ್ತಲು ಬೆಳಕಿನ ಸಂಯೋಜನಾ ಚಿತ್ರಗಳೇ ಹೆಚ್ಚು ಎನ್ನುತ್ತಾರೆ ಬಸವರಾಜು.

ಸ್ವಾಮಿಯವರು ಇದ್ದಕ್ಕಿದ್ದಂತೆಯೇ ಒಂದು ದಿನ ನನ್ನ ಬಳಿ ಬಂದರು. "ನೋಡಯ್ಯಾ ನಾನು ನಾಳೆಯೇ ಮೈಸೂರು ಬಿಡುತ್ತಿದ್ದೇನೆ" ಎಂದರು. "ಎಲ್ಲಿಗೆ ಹೋಗುತ್ತಿದ್ದೀರಿ, ಸಾರ್?" ಎಂದೆ. "ನನ್ನ ತಾಯಿಯ ಊರಿಗೆ"

